# ಕೊರವಂಜಿ

ಅಕ್ಟೋಬರ್ ೧೯೪೩




ಸಂಪಾದಕರು:
ಶ್ರೀ. ರಾ. ಶಿ.

ಸಲಹೆಗಾರರು:
ಶ್ರೀ. ನಾ. ಕಸ್ತೂರಿ

ಚಿತ್ರಕಾರರು:
ಶ್ರೀ. ಆರ್. ಕೆ. ಲಕ್ಷ್ಮಣ್





ಬಿಡಿಪತ್ರಿಕೆ
ಎರಡಾಣೆ.


ನಗೆಯ ಮಾಸ ಪತ್ರಿಕೆ

# ಕೊ ರ ವ ಂ ಜಿ

ಕೊರವಂಜಿಯು ಪ್ರತಿ ತಿಂಗಳ ಪಾಡ್ಯವೂ ಹೊರಬೀಳುವುದು.

ತಿಳಿ ಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನು ದ್ವೇಷಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಸಂಪಾದಕೀಯ ಪತ್ರ ವ್ಯವಹಾರಗಳನ್ನು ಸಂಪಾದಕರು. ನಂ. ೧, ವೆಂಕಟ ರಂಗೈಯ್ಯಂಗಾರ್ ರಸ್ತೆ, ಮಲ್ಲೇಶ್ವರ, ಬೆಂಗಳೂರಿನಲ್ಲಿ ನಡೆಸಬೇಕು.

ವ್ಯವಸ್ಥಾಪಕರಲ್ಲಿ ಮಿಕ್ಕ ವಿಷಯುಗಳನ್ನು ಪ್ರಸ್ತಾಪಿಸಬೇಕು.

ವ್ಯವಸ್ಥಾಪಕರು,

೨೮–ಎ, ಲಾಲ್‌ಬಾಗ್ ರೋಡ್, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ರೂ. 2-0-0** **ಬಿಡಿ ಪ್ರತಿ 0-2-0**

---

## ವಿಷಯಾನುಕ್ರಮಣಿಕೆ





ಸಂಪುಟ ೧] ಕೊರವಂಜಿ, ಅಕ್ಟೋಬರ್ ೧೯೪೭ [ಸಂಚಿಕೆ ೭

# ಕುಹ ಕಿಡಿಗಳು

ಬೆಂಗಳೂರಿನ ಸೋಜಿಗ ನೋಡಿದ್ದಿರೇನು ?

—ಪ್ರತಿಯೊಂದು ಪೋಲೀಸ್ ಬಸ್ಸಿನಿಂದಲೂ ಗಾಂಧೀಜೀಕಿ ಜೈ ಎಂದು ಧ್ವನಿ ಬರುವುದು !

* * *

ಈ ಸಾರಿ ವಿದ್ಯಾರ್ಥಿಗಳೆಲ್ಲರೂ ಮಹಾಗಣಪತಿ ಪೂಜೆಯನ್ನು ಸಾಂಗವಾಗಿ ನೆರವೇರಿಸಿದರಂತೆ—ಜೈಲಿನಲ್ಲಿ—

* * *

'ಪೂರ್ಣಕಾಯ ಕಲ್ಪ'ವು ಹೆಬ್ಬಿಗುಬ್ಬಾಲೆಯಲ್ಲಿ ಬಹಳವಾಗಿ ಮಾರಾಟವಾಗುತ್ತಿದೆಯಂತೆ.

—ಅಲ್ಲಿನವರು ರೈಲಿನಲ್ಲಿ ಅರ್ಧ ಟಿಕೆಟ್ಟು ತೆಗೆದುಕೊಂಡು ಪ್ರವಾಸ ಮಾಡಲೋಸುಗ ಈ ವ್ಯಾಪಾರದ ಹೆಚ್ಚಾಟವಂತೆ.

* * *

ಸೀರೆಗಳು ಲಂಗಗಳಿಗಿಂತ ಎಷ್ಟೋ ಚೆನ್ನ ಎಂದು ಒಬ್ಬ ಲೇಖಕರ ಅಭಿಪ್ರಾಯ.

—ಒಪ್ಪುತ್ತೇವೆ. ಸೊಟ್ಟಗಾಲಿದ್ದವರಿಗಂತೂ ಸೀರೆಯೇ ಚೆನ್ನ.

ಎರಡನೆ ಮದುವೆ ಮಾಡಿಕೊಳ್ಳುವ ಗಂಡಸರು ಇತ್ತೀಚೀಚಿಗೆ ಕಡಿಮೆಯಂತೆ.

—ಅಂದರೆ ಸತ್ತವರೂ ಸುದ್ದಿ ಹೇಳುತ್ತಾರೆಯೇ ?

* * *

ಜನರನ್ನು ನಗಿಸುವುದಕ್ಕಿಂತ ಅಳಿಸುವುದು ಸುಲಭವೆಂದು ನಮ್ಮ ಬಾತ್ಮೀದಾರರೊಬ್ಬರು ಬರೆಯುತ್ತಾರೆ.

ಹೌದು ಈ ಹಾಸ್ಯಪ್ರಧಾನ ಲೇಖನಗಳಿಂದ.

* * *

'ಹಾಲಿನ ಸಮೃದ್ಧಿಯೇ ಜನಾಂಗದ ಬೆನ್ನುಬಲ' ಎಂದು ವೈದ್ಯರೊಬ್ಬರ ಹೇಳಿಕೆ.

—ಈಗ ತಿಳಿಯಿತು ನಮ್ಮ ದೇಶದ ಬೆನ್ನು ಬಲವು ನೀರು ನೀರಾಗಿರುವುದರ ಕಾರಣ.

* * *

ಹಿಂದೂಸ್ಥಾನದವರು ಯುದ್ಧಸಹಾಯವನ್ನು ಸಾಕಷ್ಟು ಮಾಡುತ್ತಿರುವರು ಎಂದು ಬ್ರಿಟನ್ನಿನ ಮಂತ್ರಿವರ್ಯರು ಹೇಳಿದರಂತೆ.

—ಹೌದೂ ನಾವು ಒಪ್ಪುತ್ತೇವೆ. ನಮ್ಮೂರಿನಲ್ಲಿ ಎರಡು ಯಾಗಗಳನ್ನು ಆಗಲೇ ಮಾಡಿ ಆಯಿತು.

* * *

ಮಾರವಾಡಿಯೊಬ್ಬನಿಗೆ ಒಂದು ಹೃದಯ ಸ್ತಂಭನದ ಅನುಭವವುಂಟಾಯಿತಂತೆ.

—ನಷ್ಟ ಪೈಡು ಆದ ಕಾಗದ ಒಂದನ್ನು ಮೂರಾಣೆ ದಂಡ ಕೊಟ್ಟು ತೆಗೆದು ನೋಡುವಲ್ಲಿ ಬೇರೊಬ್ಬ ಮಾರ್ವಾಡಿಯ ಜಾಹೀರಾತನ ಚೀಟಿ ಮಾತ್ರ ಸಿಕ್ಕಿತಂತೆ.

* * *

ನಮ್ಮ ಶಾಲೆಯ ಹುಡುಗರು ಕೂಡ ಪಂಜಾಬೀ ಇಜಾರಗಳನ್ನು ಹಾಕಲಾರಂಭಿಸಿರುವಿರಂತೆ.

—ಪರೀಕ್ಷೆ ಕಾಲದಲ್ಲಿ ಈ ದೊಡ್ಡ ಇಜಾರಗಳಿಂದ ಪ್ರಯೋಜನ ಇದ್ದೇ ಇರಬೇಕು, ಪುಸ್ತಕಗಳನ್ನು ಮುಚ್ಚಿಡಲು.

* * *

ಉತ್ತರ ದೇಶದ ಪೋಸ್ಟಾಫೀಸೊಂದು ಸುಟ್ಟ ಮಾರನೆ ದಿನವೇ ಇಬ್ಬರು ಪೋಲೀಸಿನವರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟರಂತೆ.

—ಅಂದಮೇಲೆ ಪೋಸ್ಟಾಫೀಸಿನಲ್ಲಿ ಬೇಕಾದಷ್ಟು ಹಣ ಇದ್ದಿರಬೇಕು, ಸುಡುವ ಮೊದಲು.

# ಹುರಿಗಾಳು

"ಒಂದು ಜೊತೆ ಬಳೆ ವ್ಯಾಪಾರ ಮಾಡುವುದಕ್ಕೆ ಈ ಹೆಣ್ಣುಮಕ್ಕಳಿಗೆ ಎರಡು ಗಂಟೆ ಕಾಲ ಬೇಕು" ಅಂತ ಒಬ್ಬರು ವೃದ್ಧರು ಗೊಣಗುತ್ತಾರೆ. ಬೇಗ ಬೇಗ ವ್ಯಾಪಾರ ಮಾಡುವುದನ್ನು ಅವರು ಕಲಿತರೆ, ಕೊಳ್ಳುವ ಬಳೆಗಳಿಗೆ ಕೈಗಳು ಸಾಲದು.

೨

ಮದರಾಸ್ ಪ್ರಾಂತದ ಪಬ್ಲಿಕ್ ಸರ್ವಿಸ್ ಕಮಿಷನ್ನಿನ ಕಛೇರಿಯನ್ನು ಕಿವುಡು ಮೂಗರ ಪಾಠಶಾಲೆಯಲ್ಲೇ ಇನ್ನು ಮುಂದೆ ನಡೆಸುವರಂತೆ. ಕಿವುಡುತನವನ್ನೂ ಮೂಗುತನವನ್ನು ಕಲಿಸಲು ಪಬ್ಲಿಕ್ ಸರ್ವಿಸ್ ಕಮಿಷನರಿಗಿಂತ ಉತ್ತಮ ಉಪಾಧ್ಯಾಯರಿಲ್ಲವೆಂಬುದು ನಿರ್ವಿವಾದ ವಿಷಯ.

೩

ಸಂಪೂರ್ಣವಾಗಿ ಒಂದು ಕೀರ್ತನೆಯನ್ನು ಹಾಡಲು ಬರದೆ ಇದ್ದರೆ, ಅದನ್ನು ತೊಡಗಲೇಬಾರದು ಎಂದು ಗುರುಗಳು ಉಪದೇಶ ಮಾಡಿದರೆ, ಶಿಷ್ಯ 'ಯಾಕೆ ಗುರುಗಳೇ! ಸಭಿಕರು ಕಡೇತನಕ ಹಾಡುವುದಕ್ಕೆ ಸಮ್ಮತಿಸಿದರೆ ತಾನೆ ತೊಂದರೆ' ಅಂದನಂತೆ.

೪

ಮಧ್ಯಪ್ರಾಂತದ ಬೆಟ್ಟಗುಡ್ಡಗಳಲ್ಲಿರುವ ಅನಾಗರಿಕ ಜನಾಂಗಗಳ ನಡುವೆ ಮನೆ ಮಾಡಿಕೊಂಡು ಅವರ ಸೇವೆ ಮಾಡುತ್ತಿರುವ ಪಾದ್ರಿ ಒಬ್ಬರು "ಅನಾಗರಿಕರು ಒಂದು ರೀತಿಯ ಇಸ್ಪೀಟು ಆಡುತ್ತಿರುವುದನ್ನು ನಾನು ನೋಡಿದ್ದೇನೆ'' ಎಂದು ಬರೆದಿದ್ದಾರೆ. ಇದೇನು ಮಹಾ! ನಮ್ಮೂರಲ್ಲೇ ಈ ದೃಶ್ಯವನ್ನು ನಾನು ನೋಡಿದ್ದೇನೆ.

೫

''ಸೀರೆ ಬಣ್ಣ ಹೋದ್ರೆ ಕೊಟ್ಟ ಹಣ ವಾಪಸ್ಸು ಮಾಡುತ್ತೀರಾ?'' ಎಂಬ ಪ್ರಶ್ನೆಗೆ, ಎಲ್ಲೋ ಜ್ಞಾನದಲ್ಲಿ ಜವುಳಿ ಅಂಗಡಿ ಮಾಲೀಕರು, ''ಅಯ್ಯೋ! ಅನುಮಾನ ಪಡಬೇಡಿ, ತಾಯಿ! ದಿನವೂ ನೂರಾರು ಜನಕ್ಕೆ ಹಣ ವಾಪಸ್ಸು ಮಾಡುತ್ತಲೇ ಇದ್ದೇವೆ" ಅಂತ ಹೇಳಿಬಿಡೋದೇ!

೬

ಅಂತರಿಕ್ಷದಲ್ಲಿ ೪೦ ಮೈಲಿ ಎತ್ತರ ತೆಗೆದುಕೊಂಡು ಹೋದರೆ, ಬೇಳೆ ಬಹ ಚೆನ್ನಾಗಿ ಬೇಯುತ್ತೆ ಅಂತ ನನ್ನ ವೈಜ್ಞಾನಿಕ ಸ್ನೇಹಿತರೊಬ್ಬರು ಹೇಳುತ್ತಿದ್ದರು. ಈ ಸಮಾಚಾರವನ್ನ ಕೂಡಲೇ ಹೋಟೇಲ್ ಮಾಲೀಕರಿಗೆ ತಿಳಿಸಬೇಕು.

೭

ಪುರುಷರಿಗೂ ಸ್ತ್ರೀಯರಿಗೂ ನಮ್ಮ ದೇಶದಲ್ಲಿ ಒಂದೇ ಸಮನಾದ ಹಕ್ಕುಗಳಿರಬೇಕೆಂದು ಒಬ್ಬರು ಮಹಿಳಾ ಶಿರೋ

ಮಣಿಗಳು ಚಳುವಳಿ ಹೂಡಿರುವರು. ಪುರುಷರ ಪರವಾಗಿ ನಾವು ಆಕೆಯನ್ನು ವಂದಿಸುವೆವು.

೮

"ನಂಬು, ನಂಬಿಲೆ, ಜೀವ; ನಂಬಿ ಕೆಟ್ಟವರಿಲ್ಲ" ಎಂದರು ಆ ಹಿಂದಿನ ಕವಿಗಳು. ಆದಾಯ ತೆರಿಗೆ ವಸೂಲು ಮಾಡುವವರಿಗೂ ಆಕ್ಟ್ರಾಯಿ ಆಫೀಸಿನವರಿಗೂ ನಾವು ಅದನ್ನೇ ಹೇಳುತ್ತಿದ್ದೇವೆ.

೯

ಮದ್ರಾಸ್ ಪ್ರಾಂತ್ಯದಲ್ಲಿ ಕಳೆದ ವರ್ಷಕ್ಕಿಂತ ಈ ವರ್ಷ ೧೩೨೫ ವಿಮಾ ಏಜೆಂಟರು ಹೆಚ್ಚಾಗಿರುವರಂತೆ. ಮೈಸೂರಿನ ಕಡೆಗೆ ಅಲ್ಲಿಯ ಜನರು ನುಗ್ಗಿದುದರ ಗುಟ್ಟು ಈಗ ತಿಳಿಯಿತು.

೧೦

ಕಾಲೇಜು ಕ್ರಿಕೆಟ್ ಆಟಗಾರರೊಬ್ಬರು ತಾವು ಇದುವರಿಗೂ ಮಾಡದಿರುವ ಒಂದು ಸಹಾಸವನ್ನು ಬರುವ ತಿಂಗಳು ಮಾಡುವರೆಂದು ಅವರ ಸ್ನೇಹಿತರು ಹೇಳುತ್ತಿದ್ದಾರೆ. ಅಂದರೆ, ಬರುವ ತಿಂಗಳು ಅವರು ಕ್ರಿಕೆಟ್ ಆಡುತ್ತಾರೆ ಅಂತ ಅರ್ಥವೋ?

೧೧

ಆಕಳಿಸುವುದು ಆರೋಗ್ಯಕ್ಕೆ ಒಳ್ಳೆಯದಂತೆ! ಸಂಗೀತ ಕೇಳುವವರ ಆರೋಗ್ಯ ಚೆನ್ನಾಗಿರುವುದಕ್ಕೆ ಇದೇ ಕಾರಣವಿರಬಹುದಲ್ಲವೆ?

೧೨

"ಸ್ವಾಮಿ! ಹೋದ ವರ್ಷ ಇದೇ ಕಾಲಕ್ಕೆ ನಾನು ತಮ್ಮ ಹೋಟಲಿಗೆ ಬಂದು ಊಟಮಾಡಿ ಕಾಸು ಕೊಡದೆ ಇದ್ದದ್ದಕ್ಕೆ ನನ್ನನ್ನು ಒದ್ದು ಕಳುಹಿಸಿದಿರಿ" ಅಂತ ಹಸಿದ ಪ್ರಾಣಿಯೊಬ್ಬರು ದೈನ್ಯದಿಂದ ಹೇಳಿದಾಗ, ಹೋಟಲ್ ಮಾಲೀಕರು, "ಕ್ಷಮಿಸಿ, ಸ್ವಾಮಿ ಇನ್ನು ಮೇಲೆ ಹಾಗೆ ಮಾಡುವುದಿಲ್ಲ." ಅಂತ ಉತ್ತರ ಕೊಟ್ಟರು. ಕೂಡಲೇ, ಆಗಂತುಕರು, "ಹಾಗಾದರೆ, ಊಟಕ್ಕೆ ಬಡಿಸಿ" ಅಂತ ಹೇಳಿದರೆ, ಮಾಲೀಕರು ಯಾವ ಧೈರ್ಯದ ಮೇಲೆ ಎಲೆ ಹಾಕುತ್ತಾರೆ, ಹೇಳಿ.

---

ನವ ಯುವಕರ ಹಾಸ್ಟೆಲಿನಲ್ಲಿ ಗಲಭೆಯೋ ಗಲಭೆಯಂತೆ—

—ಒಂದು ಗಂಟೆ ಮುಂದುವರಿಸಿದ್ದಾರಲ್ಲ—ಇನ್ನು ಮೇಲೆ ಯಾವ ಹೊತ್ತಿಗೆ ಸಂಧ್ಯಾವಂದನೆ ಮಾಡಬೇಕು? ಎಂದು.

* * *

ಒಂದು ರೀತಿಯಾಗಿ ಜರ್ಮನರಂತೆಯೇ ಛಳಿಗಾಲ ಬಂತಲ್ಲಪ್ಪಾ ಬೆಚ್ಚಗೆ ಹೊದೆಯಲು ಬಟ್ಟೆಯೇ ಇಲ್ಲವಲ್ಲಾ ಎಂದು ನಾವೂ ಅವರಂತೆಯೇ ಹೊಡೆದುಕೊಳ್ಳುವ ಹಾಗಾಗಿದೆ.

# ಗತ್ರೀ ತಂತ್ರ



"ನಾಳು ದುರಭ್ಯಾಸ ! ಎಷ್ಟು ಕೊಡವಿದರೂ ಹೋಗುವುದಿಲ್ಲ ! ಇಪ್ಪತ್ತು ವರ್ಷದಿಂದ ಬೆನ್ನು ಹತ್ತಿದೆ ಭೇತಾಳ !'' ಅಂತ ನಶ್ಯದ ಡಬ್ಬಿಯನ್ನು ತೆರೆಯುತ್ತಾ ಇನ್ನು ಮೇಲೆ ಯಾರೂ ಮೂಗರಳಿಸಬೇಕಾಗಿಲ್ಲ.

ಆಧುನಿಕ ಮಹರ್ಷಿಗಳಾದ ಮನಃಶಾಸ್ತ್ರಜ್ಞರು ಇಂತಹ ದುರಭ್ಯಾಸಗಳಿಂದ ನಮ್ಮನ್ನು ಪಾರುಮಾಡಲು ಉಪಾಯಗಳನ್ನು ಕಂಡುಹಿಡಿದಿದ್ದಾರೆ; ಪ್ರಯೋಗ ಮಾಡುತ್ತಿದಾರೆ; ಫಲ ಪಡೆಯುತ್ತಿದಾರೆ; ಕೀರ್ತಿ ಗಳಿಸುತ್ತಿದಾರೆ.

ನಿನ್ನೆ ಮೊನ್ನೆವರೆಗೂ ನನಗೆ ಈ ವಿಷಯ ಗೊತ್ತಿರಲಿಲ್ಲ. ಈದಿನ ಬೆಳಗ್ಗೆ ಭಾಸವಾಯಿತು. ಗತ್ರೀ ಅಂತ ಒಬ್ಬರು ಬರೆದಿರುವ "ಕಲಿಯುವ ಮನದ ಶಾಸ್ತ್ರ" (Psychology of Learning) ಎಂಬ ಪುಸ್ತಕವನ್ನು ನನ್ನ ಕೈಲಿಟ್ಟು ಗರುಡ, ಲೋ ! ಲೈಬ್ರರಿಯಲ್ಲಿ ಹಾಕಿ ಬಿಟ್ಟು ಬಾರೋ, ಅಂದ. ಒಂದೇ ಕೈಗೆ ಭಾರ ಅನ್ನಿಸಿತು. ಎರಡರಲ್ಲೂ ಹಿಡಿದುಕೊಂಡಾಗ ಗ್ರಂಥ ಇಬ್ಭಾಗವಾಗಿ ಬಾಯಿ ತೆರೆಯಿತು. ಆಗ ಅದರೊಳಗಿದ್ದ ದುರಭ್ಯಾಸ ನಾಶನೋಪಾಯದ ವಿವರ ಕಣ್ಣಿಗೆ ಬಿತ್ತು.

ತಿಳಿದದ್ದನ್ನ ನಾಲ್ಕು ಜನರಲ್ಲಿ ಹಂಚಿದರೆ ಪಂಚಾಮೃತ ದಾನಮಾಡಿದ ಪುಣ್ಯ ಅಂತ ನನ್ನ ಮೇಷ್ಟರೊಬ್ಬರು ಹೇಳುತ್ತಿದ್ದರು. ಇಕೋ, ಪಂಚಾಮೃತ:

ದುರಭ್ಯಾಸಗಳನ್ನು ಜಯಿಸಿ ಸಭ್ಯತೆ ಸಂಪಾದಿಸಲು ಗತ್ರೀ ಸಾಹೇಬರು ನಾಲ್ಕು ಮುಖ್ಯ ಮಾರ್ಗಗಳನ್ನು ಸೂಚಿಸಿರುವರು. ಅವುಗಳನ್ನು ಅರ್ಥಮಾಡಿಕೊಳ್ಳಲು ಒಂದು ಉದಾಹರಣೆಯನ್ನು ತೆಗೆದು ಅದಕ್ಕೆ ಅನ್ವಯಿಸುವಂತೆ ಪ್ರತಿಪಾದಿಸುತ್ತೇನೆ.

ಸಿಗರೇಟು ಸೇದುವುದಿಲ್ಲ ಎಂಬ ಕೆಟ್ಟ ಹಟವನ್ನೇ ತೆಗಿದುಕೊಳ್ಳೋಣ. ದೇವರು ಕೊಟ್ಟ ಬಾಯನ್ನು ಕೇವಲ ಅನ್ನಪಾನೀಯಗಳಿಗೆ ಮಾತ್ರ ಉಪಯೋಗಿಸುತ್ತಾ ನವನಾಗರಿಕತೆಯಿಂದ ದೂರವಾಗಿ ವದನ ಶುದ್ಧಿಗೆ ಮರುಳಾದ ಮಂಕರನ್ನು ಹೇಗೆ ತಿದ್ದುವುದು, ಎಂಬ ಪ್ರಶ್ನೆಗೆ ಗತ್ರೀಯವರ ಸಹಾಯದಿಂದ ಉತ್ತರ ಹೇಳೋಣ ! ಆತನ ವ್ರತವನ್ನು ಭಂಗಿಸಿ ಆತನ ಬಾಯಿಂದ ಹೊಗೆ ಹೊರಡಿಸಬೇಕಾದರೆ ನಾವು ನಾಲ್ಕರಲ್ಲೊಂದು ರೀತಿಯಲ್ಲಿ ಕಾರ್ಯಾಚರಣೆ ಮಾಡಬೇಕಂತೆ.

ಮೊದಲನೆಯದು: ಆತನಿಗೆ ಈಗಿನ ದುರಭ್ಯಾಸದ ಪರಮಾವಧಿಯನ್ನು ಪರಿಚಯ ಮಾಡಿಕೊಟ್ಟು ಅದರಲ್ಲಿ ತೀವ್ರ ವೈರಾಗ್ಯ ಅಂಕುರಿಸುವಂತೆ ಮಾಡಿಸಬಹುದು. ಭೋಗದ ಪರಾಕಾಷ್ಠೆಯೇ ತ್ಯಾಗ....ಮೂರು ವರ್ಷದ ಒಬ್ಬ ಹುಡುಗನಿಗೆ ಬೆಂಕಿ ಕಡ್ಡಿಯನ್ನು ಗೀಚುವ ಕೆಟ್ಟ ಚಾಳಿ. ಅದನ್ನು ನಾಶಮಾಡುವುದಕ್ಕಾಗಿ ಗತ್ರೀಯವರು ಒಂದು ಉಪಾಯ ಮಾಡಿದರಂತೆ. ಅವರು ೧೫ ಬೆಂಕಿ ಪೊಟ್ಟಣಗಳನ್ನು ಕೊಂಡು ಹುಡುಗನ ಸಂಗಡ ಮನೆಯ ಹಿಂದೆ ಹೋಗಿ ಅವುಗಳಲ್ಲಿನ ಕಡ್ಡಿಗಳನ್ನೆಲ್ಲ ಒಂದೊಂದಾಗಿ ಬಲವಂತದಿಂದ ಗೀಚಿಸಿದರಂತೆ. ಕಡೆಕಡೆಗೆ ಹುಡುಗನಿಗೆ ವೈರಾಗ್ಯ ಹುಟ್ಟಿ ಕೋಪ ಬಂದು ಆತ ಕಿರಚಿದರೂ ಬಿಡದೆ ಶಿಕ್ಷೆಯನ್ನು ಮುಂದುವರಿಸಿದ್ದರಿಂದ ಆ ದುರಭ್ಯಾಸ ನಿರ್ಮೂಲವಾಯಿತಂತೆ. ಹಾಗೆಯೇ, ಕಂಠ ಪೂರ್ತಿಯಲ್ಲ ಕಪಾಲ ಪೂರ್ತಿ ದಿನಕ್ಕೆಂಟುಸಾರಿ ಆಹಾರ ಪಾನೀಯಗಳನ್ನು ತರುಣರೊಳಗೆ ತುರುಕಿದರೆ ಅವರಿಗೆ ವದನದ ಮುಖ್ಯ ಉದ್ದೇಶವೇನೆಂಬುದು ಗೊತ್ತಾಗಿ, ಅಮುಖ್ಯ ಉದ್ದೇಶಗಳಲ್ಲಿ ಜುಗುಪ್ಸೆ ಜನಿಸಿ, ಅವರು ಬಾಯಿಗೆ ಬತ್ತಿ ಏರಿಸಿ ಬದುಕನ್ನು ನೇರ್ಪಡಿಸುತ್ತಾರೆಂಬುದೇ ಗತ್ರೀಯವರ ಅಭಿಪ್ರಾಯ !

ಎರಡನೆಯದು: ಈಗಿನ ದುರಭ್ಯಾಸಕ್ಕೆ ಪ್ರತಿಯಾಗಿ ಮತ್ತೊಂದು ಸುರಭ್ಯಾಸವನ್ನು ನಿಧಾನವಾಗಿ ಕಲಿಸುವುದು. ಅಂದರೆ, ನಮ್ಮ ಉದಾಹರಣೆಯಲ್ಲಿ ಸಿಗರೇಟನ್ನು ಸೇದಿಸುವುದು. ಸಂಯುಕ್ತ ಸಂಸ್ಥಾನದ ಸೈನ್ಯ ಇಲಾಖೆಯಲ್ಲಿ ಕುದುರೆಗಳನ್ನು ಪಳಗಿಸುವುದು ಈ ಎರಡನೆಯ ಗತ್ರೀ ತಂತ್ರದಂತೆಯೇ. ಅದರ ಬೆನ್ನ ಮೇಲೆ ಒಂದು ಸ್ಟ್ಯಾಂಪು, ಒಂದು ಕರ್‌ಚೀಫು, ಒಂದು ಟವಲು, ಒಂದು ಕಂಬಳಿ, ಒಂದು ಓವರ್‌ಕೋಟು, ಒಂದು ಚೀಲ ಹುರುಳಿ-ಹೀಗೆ ಬೆಂಬಲವನ್ನು ಹೆಚ್ಚಿಸಿ, ಕ್ರಮವಾಗಿ ಬಾಲ ಮಾಮನ, ಥಾಂಡಿಗ, ಹೀಗೆ ಸವಾರರನ್ನು ಆರಿಸಿ ಕೂರಿಸುವರಂತೆ. ಹಾಗೆಯೇ, ನಮ್ಮ ಗಂಡುಮಕ್ಕಳ ವದನಾರವಿಂದವನ್ನು ಕಾಲಕ್ಕೆ ಸರಿಯಾಗಿ ಮಾರ್ಪಡಿಸಲು ಏಳೆಂಟು ದಿನಗಳಾದರೂ ಬೇಕಾಗಿ ಬರಬಹುದು. ಆದರೂ ನಾವು ನಿರಾಶರಾಗದೆ ತುಟಿ ಪಿಟಕ್ಕೆನ್ನದೆ (ಪಿಟಕ್ ಎಂದಾಗ ಸಿಗರೇಟು ಕೆಳಕ್ಕೆ ಬಿದ್ದು ಹೋಗುವ ಸಂಭವವಿದೆಯಾದ್ದರಿಂದ) ಕಾರ್ಯೋನ್ಮುಖರಾಗಬೇಕು. ಸಿಗರೇಟು ಸೇದದ ಕಾಡು ಮನುಷ್ಯನ ಸುತ್ತ ನಾಗರಿಕರನ್ನೇ ಕೂರಿಸಿ ಆತನ ಮುಖಕ್ಕೆ ಧೂಮಾರತಿ ಎತ್ತಿಸಿ ಮೂಗಿಗೆ ಮುಸಿ ಹಿಡಿಸಿ ಬಿಟ್ಟ ಕಡ್ಡಿಗಳನ್ನು ಹಚ್ಚಿಸಿ ಕೊಡಿಸುತ್ತಾ ಬಂದಲ್ಲಿ ಆತ ಬರ ಬರುತ್ತಾ ಆ ಕಂಪಿಂಪುಗಳಿಗೆ ಕಕ್ಕಾಬಿಕ್ಕಿಯಾಗಿ ಬಾಯಿಬಿಡುತ್ತಾನೆ, ಖಂಡಿತ.

ಮೂರನೆಯದು: ನಿರ್ಮೂಲಮಾಡಬೇಕಾದ ದುರಭ್ಯಾಸವನ್ನು ಕೈಕೊಳ್ಳಬೇಕೆಂಬ ಪ್ರೇರಣೆ ಬಂದಾಗಲೆಲ್ಲಾ ಯಾವುದಾದರೂ ಒಂದು ಶಿಕ್ಷೆಯನ್ನು ಕೊಡುವುದೇ

**ಗತ್ರೀ ತಂತ್ರ**ಗಳಲ್ಲಿ ಮೂರನೆಯದು. ಇದನ್ನ 'ದಂಡ' ಎಂದು ಕರೆದರೆ ಅವರು ಕೋಪಿಸಿಕೊಳ್ಳಲಾರರು ! ಈ ಉಪಾಯದ ಬೆಲೆಯನ್ನು ಜಗತ್ತಿನ ನಾನಾ ಜನಾಂಗ ಗಳೂ ಆ ಜನಾಂಗಗಳ ಮೇಷ್ಟ್ರುಗಳೂ ಅರಿತಿದ್ದಾರೆ. ಇದೇ ತತ್ವವನ್ನನುಸರಿಸಿ, ಪ್ರಪಂಚವೆಲ್ಲ ಹೊಗೆಯಾಡುತ್ತಿರುವ ಈ ಕಾಲದಲ್ಲಿ, ಬ್ರಹ್ಮ ಕೊಟ್ಟ ಬಾಯನ್ನು ಕೇವಲ ಕುಡಿತ ತಿನಿಸುಗಳಿಗಾಗಿಯೂ ನಿಂದಾ ಸ್ತೋತ್ರಗಳಿಗಾಗಿಯೂ ದೇಹೀನಾಸ್ತಿ ಗಳಿಗಾಗಿಯೂ ಉಪಯೋಗಿಸುತ್ತಿರುವ ಮಾನವರನ್ನು ಬಹುಬೇಗ ಸುಧಾರಿಸಬಹು ದಾಗಿದೆ. ಸಿಗರೇಟನ್ನು ಸಮಕ್ಷಮದಲ್ಲಿರಿಸುವುದು, ಸೇದದೆ ಸುಮ್ಮನಿದ್ದಲ್ಲಿ ಪ್ರಹಾರ ಮಾಡುವುದು, ಈ ಕ್ರಮದಿಂದ ನಾವು ಸನಾತನಿಗಳನ್ನೂ ಕೂಡ ಹದಕ್ಕೆ ತಂದು ಹೊಗೆಸೊಪ್ಪಿನ ಕಂಪನಿಗಳಿಗೆ ಹೆಚ್ಚು ಲಾಭ ಕೊಡಿಸಬಹುದು.

ನಾಲ್ಕನೆಯದು: ಇದು ಕೊನೆಯದಾದರೂ ಕನಿಷ್ಠವಾದ ತಂತ್ರವಲ್ಲ; ಬಹು ಸ್ವಾರಸ್ಯವಾದದ್ದು; ಮತ್ತು ಫಲಕಾರಿಯಾದದ್ದು. ದುರಭ್ಯಾಸವನ್ನು ದೂರಮಾಡಲು ಅದಕ್ಕೆ ಪ್ರೇರಕವಾದ ಎಲ್ಲಾ ವಸ್ತುಗಳನ್ನೂ ವಾತಾವರಣದಿಂದ (ವಾತಾವರಣ ಪಿತ್ತಾವರಣ ಕಫಾವರಣ ಎಂಬ ಮಾತುಗಳು ಈಗ ಬಳಕೆಗೆ ಬರುತ್ತಿವೆ) ತೆಗೆದುಹಾ ಕುವುದೇ ಈ ತಂತ್ರ. ಅಂದರೆ, ಬರೇ ಆಹಾರಪಾನೀಯ ಸೇವನೆ ಎಂಬ ದುರಭ್ಯಾಸ ತೆಗಿದುಹಾಕಿ ಬಾಯಿಗೆ ಹೊಗೆ ತುಂಬುವ ಪ್ರಯತ್ನ ತಾನೆ ನಮ್ಮದು ? ಅದಕ್ಕೆ ಗತ್ರೀ ಅವರ ಸಲಹೆ ಏನೆಂದರೆ, "ನವನವೀನ ತರಣರನ್ನು ಒಂದು ಕೊಠಡಿಯಲ್ಲಿ ಕೂಡಿಸಿ, ಐದಾರು ಗಂಟೆಗಳ ಕಾಲ ಕಾಫಿ ಮಸಾಲೆದೋಸೆ ಕೊಡಿಸದೆ, ಬರೀ ಒಂದು ಬೆಂಕಿ ಪೊಟ್ಟಣ ಸಿಗರೇಟು ಪ್ಯಾಕೆಟ್ಟುಮಾತ್ರ ಅವರ ಕಣ್ಣು ಮುಂದಿರಿಸಿ ! ಆ ಮೇಲೆ ಬಾಗಿಲು ತೆಗೆದು ಅವರನ್ನು ಹೊರಕ್ಕೆ ಬಿಡಿ ! ಸೇದುಬತ್ತಿ ಸಮೇತವಾಗಿ ಸವಾರಿ ಚಿತ್ತೈಸುತ್ತದೆ........ನೋಡುತ್ತಿರಿ!"

ವೈಜ್ಞಾನಿಕ ದೃಷ್ಟಿಯಿಂದ ವಿಜ್ಞಾನ ವಿಷಯವನ್ನು ವಿವರಿಸುವ ಈ ಲೇಖನ ದಲ್ಲಿ ಹೆಚ್ಚು ಉದಾಹರಣೆಗಳನ್ನು ತೆಗೆದು ಗತ್ರೀ ತಂತ್ರಗಳನ್ನು ವಾಚಕರಿಗೆ ಪರಿ ಚಯಮಾಡಿಸಲು ಸಾಧ್ಯವಾಗದೆ ಇದ್ದುದಕ್ಕೆ ಕ್ಷಮೆಬೇಡುತ್ತೇನೆ—

—ನಾ. ಕ.

# ಧರ್ಮ ಸಂಕಟ

ನಮ್ಮ ಮನೆ ಮುಂದುಗಡೆಯೇ ನಾನು ಓದಿದ ಪ್ರಿಮರಿ ಸ್ಕೂಲು. ಇವತ್ತಿಗೂ ಹಾಗೆಯೇ ಇದೆ. ಅದೇ ಮೇಷ್ಟ್ರುಗಳು, ಬೆಳಗಾದರೆ ಅದೇ ಪ್ರಾರ್ಥನೆ. ಪುಟ್ಟಮಕ್ಕಳ ಚೆಲ್ಲಾಟ. ಅವರನ್ನು ನನ್ನ ಕೊಠಡಿಯ ಕಿಟಕಿಯು ಮೂಲಕ ನೋಡಿದಾಗಲೆಲ್ಲಾ

"ಅಯ್ಯೋ! ಅವರ ಹಾಗೆ ನಾನೂ ಚಿಕ್ಕ ಮಗುವಾಗಿದ್ದರೆ ಎಷ್ಟೋ ಚನ್ನಾಗಿತ್ತು'' ಎಂದು ನನಗೆ ಅನೇಕವೇಳೆ ಅನ್ನಿಸಿದೆ ಧರ್ಮಸಂಕಟಗಳಿಗೆ ಕಟ್ಟುಬಿದ್ದಾಗೆಲ್ಲಾ. ನಾನು ಬೆಳದದ್ದೇ ತಪ್ಪು ಎಂದು ನನಗೆ ಮನದಟ್ಟಾಗಿದೆ. ಚಿಕ್ಕಮಕ್ಕಳಾಗಿದ್ದಾಗಲೇ ಒಂದು ತರಹ ಸ್ವಾತಂತ್ರ್ಯ! ನನಗಿನ್ನೂ ನೆನಪಿದೆ— ನಾಣಿ, ನನ್ನಮುಂದೆ ಅಂಗಲಾಚಿ ನಾಲಗೆ ನೀಡಿ ನಿಂತಿದ್ದರೂ, ಅಮ್ಮ ಕೊಟ್ಟ ಕೋಡುಬಳೆಯನ್ನು ಅವನಿಗೆ ಕೊಡದೆಯೇ ತಿನ್ನುತ್ತಿದ್ದೆ. ಆಗ ಅದು ಒಂದು ಹೆಮ್ಮೆಯ ಕೆಲಸವಾಗಿತ್ತು. ಅವನನ್ನು ಕರೆದು ಕೋಡುಬಳೆಯನ್ನು ತೋರಿಸಿ "ನಿನಗೆ ಬೇಕೇನೋ ?!'' ಎಂದು ಕೇಳಿ ಕೊಡುವಂತೆ ನಟಿಸಿ, ಕೊಡದೆ ಗಬಕ್ಕನೆ ಬಾಯಿಗೆ ಹಾಕಿಕೊಳ್ಳುವಾಗ ಅವನ ಅಳುಮೋರೆಯನ್ನು ನೋಡಿದರೆ ಆನಂದ; ಹಿಗ್ಗು.—ಅದೇ ನಮಗೆ ಆಗಿದ್ದ ಸ್ವಾತಂತ್ರ್ಯ! ಆಗ ನಮಗೆ ಒದಗುತ್ತಿದ್ದ ಸಂಕಟವೆಂದರೆ ಒಂದೇಒಂದು. ಮೇಷ್ಟರ ಬುಸನಾಗಪ್ಪ. ಅಷ್ಟೆ. ಬೀಸುವದೊಣ್ಣೆಯನ್ನು ತಪ್ಪಿಸಿಕೊಂಡರೆ, ಆಯುಸ್ಸು ಹೆಚ್ಚುತ್ತಿತ್ತು. ಮನೆಮುಂದೆಯೇ ಯಾವ ಬಗೆಯ ಧರ್ಮಸಂಕಟಕ್ಕು ಒಳಗಾಗದೆ ಓಡಾಡುವವರನ್ನು ಕಂಡರೆ "ನಾನೂ ಮಗುವಾಗಿದ್ದರೆ" ಎಂದು ಅನ್ನಿಸುತ್ತದೆ.

ಧರ್ಮಸಂಕಟಗಳು ಒದಗುವುದು ನಮಗೆ ವಯಸ್ಸಾದುದರ ಫಲವಾಗಿ ಎಂದು ನನ್ನ ಅಭಿಪ್ರಾಯ. ನಾವು ದೊಡ್ಡವರಾಗಿ ಬೆಳೆದಹಾಗೆಲ್ಲಾ. ಸುತ್ತಮುತ್ತಲಿನವರಲ್ಲಿ ಸಲಿಗೆ ಸ್ನೇಹ ಹೆಚ್ಚಿದ ಹಾಗೆಲ್ಲಾ, ಅದರೊಂದಿಗೇ ಒಂದು ವಿಧವಾದ ಭಯವೂ ಹೆಚ್ಚುತ್ತದೆ. ಈ ಕಾರಣದಿಂದಲೇ ನಮಗೆ ಧರ್ಮಸಂಕಟಗಳು ಒದಗುವುದು. ಜೋಬಿನಲ್ಲಿ ಕಾಸಿಲ್ಲ ಅಂತ ಹಲ್ಲುಕಿರಿಯುತ್ತಾ ಪೀಡಿಸುವ ಗಳಿಯನೊಬ್ಬರಿಗೆ ದಬಾಯಿಸಿ ಕಳುಹಿಸುತ್ತೇವೆ ಅನೇಕಸಲ. ಬುದ್ಧಿವಂತರೆಲ್ಲರೂ ಮಾಡುವುದೇ ಹೀಗೆ. ಆದರೆ ನಮಗೆ ಗಂಟಲು ಒಣಗುತ್ತೆ. ಉಪನ್ಯಾಸ ಮಾಲೆಗಳ ಭಾರವನ್ನು ಹೊರಲಾರದೆ ತಲೆನೋವುಂಟಾಗುತ್ತದೆ. ಸರಿ! ಒಂದು ಕಪ್ ಕುಡಿಯೋಣ ಅಂತ ಹೋಟಲಿಗೆ ನುಗ್ಗಿ, ಕಾಫಿಯನ್ನು ಸವಿಯುತ್ತಾ ಕುಳಿತಿರುವಾಗ(?) ಹೋಟಲಿಗೆ ಹೋದರು ಶನೇಶ್ವರನ ಕೀಟಲೆ ತಪ್ಪದು ಅಂದಹಾಗೆ, ಆ ಮನುಷ್ಯ ನಸುನಗುತ್ತಾ ನಮ್ಮ [illegible]ವೆ ಬಂದು ಕುಳಿತಾಗ ನಮಗೆ ಒದಗುವುದು ಧರ್ಮಸಂಕಟ. ಆಗ ಏನು ಮಾಡಬೇಕು ಅಂತೀರಿ? ನಾವೇನಾದರೂ ಚಿಕ್ಕಮಕ್ಕಳಾಗಿದ್ದಿದ್ದರೆ—ಅವನ್ನು ಕಂಡು ನಕ್ಕು "ಕಾಫೀ ಬೇಕೇನೋ'' ಎಂದು ಮುಗಿಸಿ

ಕೇಳಿ, "ಹೋಗೊ ನಿಂಗ್ಗೊತ್ತಿಲ್ಲ"
ಅಂತ ಅವನ ಕಣ್ಣೆದುರಿಗೇ ಕುಡಿದು ಸಂತೋಷಪಡುತ್ತಿದ್ದೆವು.

ಶಾಲೆಯಲ್ಲಿ ಬುದ್ಧಿವಂತರು ಅನ್ನಿಸಿಕೊಂಡಿರುವ ಕೆಲವು ಹುಡುಗರಿಗೆ ಒಂದು ತರಹದ ಧರ್ಮಸಂಕಟ ಒದಗುತ್ತೆ. ರಾತ್ರಿಯೆಲ್ಲಾ ದೀಪವುರಿಸಿ, ಮಸಿಸುರಿಸಿ ಕಾಗದ ಕೆಡಿಸಿ-ಮೇಷ್ಟರ ಬುರುಡೇಗೆ ಮಂಕುಹಿಡಿಸುವ ಈ ಪ್ರಭೃತಿಗಳು—ಮಣಗಟ್ಲೆ ನೋಟ್ಸುಬರೆದಿರುತ್ತಾರೆ. ಇವರ ಸ್ನೇಹಿತರಿರುತ್ತಾರಲ್ಲಾ, ಸೋಮಾರಿಗಳು ಅವರು "ಏನಯ್ಯಾ ವೆಂಕೂ, ನಿನಗೆ ಸುಸ್ತು ಆಗದೇ ಹೋದರೂ, ಆ ಪುಸ್ತಕಕ್ಕಾದರೂ,ರೆಸ್ಟ್ ಬೇಡವೇನೋ?" ಎಂದು ಮಂಗಳಾರತಿ ಎತ್ತಿ, "ನೀನು ಬಿಡಪ್ಪಾ—ನಿನಗೇ ಈ ಸಲ ಫಸ್ಟ್ ರ್ಯಾಂಕ್'' ಎಂದು ಭುಜತಟ್ಟಿ, ಮರೆಯಾಗಿಟ್ಟಿರುವ ನೋಟ್ಸಿನ ಕಂತೆಗಳನ್ನು ಹೊರಗೆಳೆದು "ಏನಯ್ಯಾ ಹಡಪ'' ಎಂದುಹೊಗಳುತ್ತಾರೆ. ನೋಟ್ಸ್‌ನ್ನು ಪರಾಂಬರಿಸಿ, ಸ್ವಲ್ಪಕೊಟ್ಟಿರುತ್ತೀಯೇನಯ್ಯಾ ಓದಿಬಿಟ್ಟು ತಂದುಕೊಡ್ತೇನೆ'' ಎಂದು ಕೇಳಿದಾಗ ನಮ್ಮ ಫಸ್ಟ್ ರ್ಯಾಂಕ್ ಹುಡುಗ ಪಡುವುದು ಧರ್ಮಸಂಕಟ "ಕೊಡೋಲ್ಲ" ಅಂದರೆ "ಜಂಭ-ತಲೆತಿರುಗ್ತಾ ಇದೆ"--ಇವನೊಬ್ಬನೇ ಪ್ರಚಂಡ ಅಂತ ತಿಳಿದುಕೊಂಡು ಬಿಟ್ಟಿದಾನೆ" ಅಂತ ಊರೆಲ್ಲಾ ದೂರು. ಅವರೇನೋ ಸಾಕ್ಷಾತ್ ಸೋಮಾರಿಗಳು—ನಿಜವಾಗಿಯೂ ಅಪ್ರಚಂಡರೇ—ತಾನು ರಾತ್ರೀಹಗಲೂ ಒದ್ದಾಡಿ, ಅದರ ಫಲವನ್ನು ಇವರಿಗೆ ಹೇಗೆಕೊಡುವುದು—ಇವನು ಮಾಡಿದ್ದು ಣ್ಣೋ ಆಮಹರಾಯರಿಗೆ? ಅದೇ ಧರ್ಮ ಸಂಕಟ.

ಅನೇಕಸಲ ಇನ್ನೊಂದು ತರಹ ಧರ್ಮ ಸಂಕಟ ಒದಗಿಬರುತ್ತೆ. ನಾನೇನೋ ಅನೇಕಸಲ ಅನುಭವಿಸಿದ್ದೇನೆ. ನನ್ನ ಗೆಳೆಯರು ಕೆಲವರಿದ್ದಾರೆ—ಸಿರಿಗನ್ನಡದ ಡಿಂಗರಿಗರು. ಕನ್ನಡ ತಾಯ ಕೊರಳಿಗೆ ಹಾರ ಹಾಕಲು, ಕುಸುಮಗಳನ್ನು ಪೋಣಿಸುತ್ತಿದ್ದಾರೆ. ಸರಿ. ತಾವು ಬರೆದ ಕವನಗಳನ್ನು ಬಹಳ ಸಂತೋಷದಿಂದ ತಂದು "ನೋಡೂ ಮೂರ್ತೀ ಮೊನ್ನೆ ಸಂಜೆ ಅವೆನ್ಯೂ ರೋಡಿನಲ್ಲಿ ವಾಕಿಂಗ್ ಹೋಗ್ತಿದ್ದಾಗ ಸ್ಫೂರ್ತಿ ಬಂತು—ಕೂಡಲೇ ಕಾಫಿ ಕುಡಿದು....ಬರೆದೆ....ಇಷ್ಟ್ರೇ ಪುಟ" ಎಂದು ಮುನ್ನುಡಿದು, ಅಭಯವಿತ್ತು ಓದುತ್ತಾರೆ....ಪೂರ್ತಿ ಪಾರಾಯಣವಾದಮೇಲೆ "ಮೂರ್ತೀ. ಚೆನ್ನಾಗಿದೆಯೇ ? " ಎಂದು ಕೇಳಿಯೇ ಬಿಡುತ್ತಾರೆ. ಆಗ ಏನನ್ನುವುದು ? ನಿಜ ಹೇಳಿದರೆ ಪ್ರಾಣಿಹಿಂಸೆ; ಸುಳ್ಳು ಹೇಳಿದರೆ ಸತ್ಯಹಿಂಸೆ! ಅಂತಹ ಧರ್ಮಸಂಕಟದಿಂಟ ಪಾರಾಗುವುದು ಪರಮ ಕಷ್ಟ. "ಊಂ....ಪರವಾಗಿಲ್ಲ....ಇನ್ನೂ ಉದ್ದವಾಗಿದ್ದರೆ ಚೆನ್ನಾಗಿತ್ತು....ಅಂತೂ ಒಂದು ತರಹಾ ಇದೆ...." ಎಂದು ನನ್ನ ಆತ್ಮಕ್ಕೂ ಅವನ ಮನಸ್ಸಿಗೂ ನೋಯದಂತೆ ಮಾತನಾಡಿ ನಸುನಗಬೇಕಾಗುತ್ತದೆ.

ಇನ್ನು ಕೆಲವು ಗೆಳೆಯರಲ್ಲಿ ಒಂದು ಚಾಳಿ ಇದೆ-ತಮಾಷೆ ಹೇಳುವುದು.

"ಒಂದು ತಮಾಷೆ ಹೇಳ್ತೀನಿ ಕೇಳು'' ಎಂದು ಕೊರೆಯಲು ಪ್ರಾರಂಭ. ಬಹಳ ಆಸಕ್ತಿಯಿಂದ ವಿವರಿಸುತ್ತಾರೆ. "ಬಹಳ ನಗು ಬರುತ್ತೆ.'' ಅಂತ ಮಧ್ಯೆಮಧ್ಯ ಬೇರೆ ಸೇರಿಸಿ ನಗುತ್ತಾರೆ. ಆದರೆ ಆ ಪರಮಾತ್ಮ ನನಗೇ ಅಷ್ಟು ಬುದ್ಧಿಶಕ್ತಿಯನ್ನು ಕೊಡಲಿಲ್ಲವೊ, ಅಥವಾ ಅವರಿಗೇ ತಮಾಷೆಯನ್ನು ತಮಾಷೆಯಾಗಿ ಹೇಳಲು ಸಾಮರ್ಥ್ಯ ಕೊಡಲಿಲ್ಲವೋ-ನಗು ನನಗೆ ಅನೇಕ ವೇಳೆ ಬರುವುದಿಲ್ಲ. ನಾನು ನಗಬೇಕೆಂದು ಬಯಸುವುದೇನೋ ಅವರ ಧರ್ಮ. ಆದರೆ ಅದೇ ನನಗೆ ಸಂಕಟ,

ಇನ್ನೊಂದು ವಿಧವಾದ ಧರ್ಮ ಸಂಕಟ ಒದಗುವುದು. ಪರೀಕ್ಷೆಯ ಫಲಿತಾಂಶಗಳು ಹೊರಬಿದ್ದ ಕಾಲದಲ್ಲಿ ಫೇಲಾದ ನಮ್ಮ ಗೆಳೆಯರನ್ನು ಮಾತನಾಡಿಸುವಾಗ ಅವರ ಮನಸ್ಸು ನೋಯದಂತೆ ನಾವು ಪಾಸು ಮಾಡಿದ್ದು ಕೇವಲ ನಮ್ಮ ಮೆದುಳಿನ ಶಕ್ತಿಯಿಂದ ಎಂದು ತೋರ್ಪಡಿಸಿಕೊಳ್ಳದೆ, ''ಏನೋ ಅದೃಷ್ಟ-ಹಣೆಬರಹ "ಎಂದು ಪರದೈವದ ಮೇಲೆ ಭಾರಹಾಕಿ, ನಾವು ಧರ್ಮಸಂಕಟದಿಂದ ಪಾರಾಗುತ್ತೇವೆ.

ಧರ್ಮಸಂಕಟಕ್ಕೇನು ಕಡಿಮೆ, ದಿನ ಬೆಳಗಾದರೆ ಒದಗುವುದೆಲ್ಲಾ ಧರ್ಮ ಸಂಕಟಗಳೇ! ಹೀಗೆ ಯೋಚಿಸುತ್ತಾ ಹೋದರೆ ನನ್ನ ಕಣ್ಣುಮುಂದೆ ಮಕ್ ಮಲ್ ಟೋಪಿ, ಜಡೆ, ನನ್ನ ಅಣ್ಣನ ಹಳೇ ಸರ್ಜ್‌ಕೋಟು ಹಾಕಿಕೊಂಡು ಚಿಕ್ಕಂದಿನಲ್ಲಿ ತೆಗೆಸಿದ ನನ್ನ ಫೋಟೋ ಕಣ್ಮುಂದೆ ಬರುತ್ತೆ "ಚಿನ್ನ" ಅಂತ ನನ್ನನ್ನೂ ಅನ್ನುತ್ತಿದ್ದ ಕಾಲ ಅದು. ಮನೆ ಮುಂದೆ ಓಡಾಡುವ ಮಕ್ಕಳನ್ನು ಕಂಡರಂತೂ ನನ್ನ ಮನಸ್ಸು ಮಗುವಿನದಂತೆ ಆಗುತ್ತದೆ. ಬೆಳೆದ ಮೀಸೆ, ಇಂಗಿ ಹೋಗುತ್ತದೆ ಹಕ್ಕಿಗಳಂತೆ ಹಾರಾಡುವ ಮಕ್ಕಳ ಲೋಕದಲ್ಲಿ ಜಂಬವಿಲ್ಲ-ಹಿರಿಯತನವಿಲ್ಲ ಕಿರಿಯತನವಿಲ್ಲ ಧರ್ಮವೂ-ಇಲ್ಲ ಅದರಿಂದುಂಟಾಗುವ ಹತ್ತಾರು ಸಂಕಟಗಳಂತೂ ಮೊದಲೇ ಇಲ್ಲ!

—''ಮೂರ್ತಿ"



"ಇದೇನ್ರಿ ಐದು ಘಂಟೆಗೆ ಇಷ್ಟು ಸಣ್ಣಗಿದ್ದ ತನ್ನಾಯಿತು?" "ಬಿಡಿ, ಹಾಳು, ಈಗೆಲ್ಲಾ ಮೂರು ಘಂಟೆಗೇ ಎದ್ದು ನಾಲ್ಕು ಘಂಟೆ ಎಂದು ಕೂಗಬೇಕಾಗಿದೆ.

# ಕಳ್ಳ ಅನುಭವ



ಕೆಲವು ದಿನಗಳ ಹಿಂದೆ ಬಸವನಗುಡಿಯಲ್ಲಿ ಸ್ನೇಹಿತರೊಬ್ಬರ ಮದುವೆಗೆ ಹೆಳಿಗೆ ಹೋದವರು ಸಾಯಂಕಾಲ ಆರು ಆರುವರೆಗಂಟೆ ಹೊತ್ತಿಗೆ ಹಿಂತಿರುಗಿ ಮಲ್ಲೇಶ್ವರಕ್ಕೆ ನಮ್ಮ ಮನೆಗೆ ಬಂದೆವು. ಬೀಗ ಹಾಕಿ ಹೋದ ಬಾಗಿಲು ನಾವು ಬರುವ ವೇಳೆಗೆ ತನ್ನಷ್ಟಕ್ಕೆ ತಾನೇ ತೆರೆದುಕೊಂಡಿತ್ತು. ಇದೇನಿದು ಎಂದು ಯೋಚಿಸುವ ಮೊದಲೇ ಖಾಕೀ ಬಟ್ಟೆಯ ಪೋಲೀಸಿನವನೊಬ್ಬನು ಒಳಗಿನಿಂದ ಹೊರಕ್ಕೆ ಬಂದ. ನೀವು ಕೇಳಬಹುದು ಖಾಕೀ ಬಟ್ಟೆಯ ಪೋಲೀಸಿನವರಲ್ಲದೆ ಬರೀ ಬಟ್ಟೆಯ ಪೋಲೀಸಿನವರು ಇರುತ್ತಾರೆಯೇ ? ಎಂದು. ಈಗೀಗ ನಮ್ಮ ಷಹರಿನಲ್ಲಿ ಮೂರರಲ್ಲಿ ಒಬ್ಬರಂತೆ ಪೋಲೀಸಿನವರು ಗುಪ್ತವೇಷದಲ್ಲಿ ಕೆಲಸಮಾಡುತ್ತಿದ್ದಾರೆಂದು ಒಂದು ವದಂತಿ ಉಂಟು. ಮೊನ್ನೆ ಇಬ್ಬರು ಮಾತನಾಡುತ್ತಿದ್ದಾಗ ನಿಮ್ಮ ಮನೆಯಲ್ಲಿ ಏನು ಅಡಿಗೆ ಎಂಬ ಪ್ರಶ್ನೆಗೆ ಬೊಂಬಾಯಿಬೋಂಡ ಕಲಕತ್ತಾ ರಸಗುಲ್ಲಾ ಎಂಬ ಉತ್ತರವು ಬಂತಂತೆ. ಭದ್ರವೇಷಧಾರಿಯಾದ ಪೋಲೀಸಿನವನು ಇವರಿಬ್ಬರ ಸಂಭಾಷಣೆಯನ್ನು ಕೇಳಿ ಇಬ್ಬರನ್ನೂ ದಸ್ತಗಿರಿ ಮಾಡಿದನಂತೆ. ನಂತರ ವಿಚಾರಿಸುವಲ್ಲಿ ಬೊಂಬಾಯಿ ಬೋಂಡ ಎನ್ನುವುದು ಗುಪ್ತ ಬಾಂಬಿಗೂ, ಕಲಕತ್ತಾ ರಸಗುಲ್ಲಾ ಎನ್ನುವುದು ಪಿಸ್ತೂಲು ಮದ್ದಿನ ಹೆಸರೆಂದೂ, ಇವೆರಡು ಹೆಸರುಗಳೂ ಕಲಕತ್ತಾ ಕ್ರಾಂತಿಕಾರಕರ ನಿಘಂಟಿನದೆಂದೂ ತಿಳಿಯಬಂತು. ಅಂತೂ ಇಂತೂ ಸಂಭಾಷಣಕಾರರಿಬ್ಬರೂ ಮೂರುದಿನ ಜೈಲಿನಲ್ಲಿ ವಾಸಮಾಡಬೇಕಾಯಿತು. ಈ ತೆರನಾದ ಸ್ಥಿತಿಯಲ್ಲಿ ಖಾಕೀ ಪೋಲೀಸಿನವರು ಎಂದು ಹೇಳಲೇಬೇಕು.

ಪೋಲೀಸಿನವನು ಹೊರಗೆ ಬಂದು "ನಿಮ್ಮದೇನ್ರಿ ಮನೆ" ಎಂದು ಕೇಳಿದ. ಹೂ ಎನ್ನುವುದಕ್ಕೆ ನನಗೆ ಗಾಬರಿ. ಮನೆಯನ್ನು ಶೋಧಿಸಲೋಸುಗ ಬಂದ ಪೋಲೀಸಿನವನಾದರೆ, ಮನೆ ನನ್ನದೆಂದರೆ, ಮನೆಯಲ್ಲಿ ಏನಾದರೂ ಅನುಮಾನಾಸ್ಪದದ ವಸ್ತು ಉದಾಹರಣೆಗೆ ಲಟ್ಟಣಿಗೆ ಸಿಕ್ಕಿದರೆ, ನನ್ನ ಕೊರಲಿಗೆ ನಾನೇ ಉರುಳು ಹಾಕಿಕೊಂಡಂತಾಗುವುದು. ಇರಲಿ ಸ್ವಲ್ಪ ಅನುಮಾನಾಸ್ಪದವಾಗಿಯೇ ಉತ್ತರ ಕೊಡೋಣವೆಂದು "ಈ ಮನೆ ನನ್ನದಲ್ಲ ಆದರೂ ನಾನು ಇಲ್ಲಿ ಸಂಸಾರ ಮಾಡಿಕೊಂಡಿರುತ್ತೇನೆ, ತಿಂಗಳು ತಿಂಗಳಿಗೂ ಬಾಡಿಗೆ ಸರಿಯಾಗಿ ಪಾವತಿಮಾಡುತ್ತಿದ್ದೇನೆ ರಸೀತಿಗಳನ್ನು ಬೇಕಾದರೆ ತೋರಿಸುತ್ತೇನೆ" ಎಂದು ಹೇಳಿದೆ. "ಅದಕ್ಕಲ್ಲಿ ! ನಿಮ್ಮ ಮನೆಗೆ ಕಳ್ಳರು ಬಿದ್ದಿದ್ದರು, ಯಾರೋ ಠಾಣೆಗೆ ಬಂದು ಸುದ್ದಿ ಹೇಳಿದರು ನಾವು ಬರುವ

ಹೊತ್ತಿಗೆ ಅವರುಗಳು ಹಿಮ್ಮುಖವಾಗಿ ಪರಾರಿ, ಕಾವಲಿಗಾಗಿ ನಾನು ಇಲ್ಲಿದ್ದೇನೆ" ಎಂದು ಹೇಳಿದನು.

ಒಳಗೆ ಹೋದೆವು. ಮೂಲೆಯಲ್ಲಿದ್ದ ಕುರ್ಚಿಯೊಂದು, ಸೈನಿಕನ ಟೋಪಿಯಂತೆ ವಕ್ರವಾಗಿ ಬಗ್ಗಿನಿಂತು ನಮ್ಮನ್ನೇ ನೋಡುತ್ತಿತ್ತು. ಜಮಖಾನವೆಲ್ಲವೂ ಅಲ್ಲಲ್ಲಿ ಒದ್ದೆಯಾಗಿ ಮಕ್ಕಳಾಡಿದಂತೆ ಕಾಣುತ್ತಿತ್ತು. ಸಕಲವೂ ಅಲ್ಲೋಲ ಕಲ್ಲೋಲ. "ಓಹೋ ಏನೋ ಅನಾಹುತ ನಡೆದುಹೋಗಿದೆ" ಎಂದಂದುಕೊಂಡು ಮೆಲ್ಲಗೆ ನನ್ನ ಹೆಂಡತಿಗೆ ಹೇಳಿದೆ" "ಅಡಿಗೆ ಮನೆಗೆ ಹೋಗಿ ನಿನ್ನ ಒಡವೆಗಳೆಲ್ಲವೂ ಸುರಕ್ಷಿತ ವಾಗಿಯೇ ನೋಡಿ ಬಾ" ಎಂದು. ಆಕೆಯು ಅಡಿಗೆ ಮನೆಗೆ ಹೋಗಿ ಸಾಸುವೆಡಬ್ಬ ವನ್ನು ತಂದು ಅವಳ ಆಭರಣಗಳಾದ ಕಾಲುಂಗರ ಗೆಜ್ಜೆಗೊಲಸು ಎರಡೂ ಸುರಕ್ಷಿತ ವಾಗಿದೆಯೆಂದು ಹೇಳಿದಳು. ತನ್ನ ಆಭರಣಗಳನ್ನು ಐಶ್ವರ್ಯವಂತರ ಮದುವೆ ಮನೆಗೆ ಹಾಕಿಕೊಂಡು ಹೋಗಲು ನಾಚಿಕೊಂಡು ಈ ರೀತಿ ಸಾಸುವೆ ಪೆಟ್ಟಿಗೆಯಲ್ಲಿ ಸುರಕ್ಷಿತವಾಗಿ ಇಟ್ಟಿದ್ದಳು. ನಂತರ ನನ್ನ ಕೊಠಡಿಗೆ ಹೋದೆ, ಬಟ್ಟೆ ಬರೆಗಳೆಲ್ಲವೂ ಅವ್ಯಾವಸ್ಥೆಯಾಗಿ ಬಿದ್ದಿದ್ದುವೇ ವಿನಹಾ ಯಾವುದೂ ಗೈರು ಹಾಜರಾಗಿರಲಿಲ್ಲ. ಈ ವೇಳೆಗೆ ಹತ್ತಿರ ಬಿದ್ದಿದ್ದ ಬೆಳ್ಳಿಯ ಮುಲಾಮಿನ ಲೋಟ ಒಂದನ್ನು ಪೋಲೀಸಿನವನು ಹಿಡಿದುಕೊಂಡು ಬೆರಳಾಡಿಸುತ್ತಿದ್ದನು. ರಾತ್ರಿ ಊಟಕ್ಕೆ ಇದು ಬೇಕೇ ಆಗುವು ದೆಂದು ನಾನು ಮೆಲ್ಲಗೆ ಅವನ ಕೈಯಿಂದ ಅದನ್ನು ಬಿಡಿಸಿಕೊಂಡು "ಎಲ್ಲವನ್ನೂ ಹೇಳಯ್ಯಾ. ಕೇಳುವಂತಾವನಾಗುತ್ತೇನೆ" ಎಂದು ಹೇಳಿದೆ. ಆತನು ಹೇಳಿದುದನ್ನು ಹಾಗೆಯೇ ಬರೆಯಲು ಅಸಾಧ್ಯ. ಅವನು ತಮಿಳಿನವನು. ಹಾಗಾಗಿ ಅದರ ಸಾರಾಂಶವನ್ನು ಮಾತ್ರ ಕೊಡುತ್ತೇನೆ.

ನಮ್ಮ ಮನೆಯ ಒಕ್ಕಲಗಿತ್ತಿಯು ಸಾಯಂಕಾಲ ಮುಸುರೆ ತಿಕ್ಕುವುದಕ್ಕೆಂದ್ು ಐದುಗಂಟೆಯ ಹೊತ್ತಿಗೆ ಮನೆಗೆ ಬಂದಳಂತೆ. ಬಾಗಿಲು ತೆಗೆದಿದ್ದನ್ನು ನೋಡಿ ಒಳಕ್ಕೆ ಬಂದಳಂತೆ. ಒಳಗೆ ಚೆಲ್ಲಾಪಿಲ್ಲಿಯಾದ ವಸ್ತುಗಳನ್ನು ನೋಡಿ ಅವಳ ಮನಸ್ಸೂ ಚೆಲ್ಲಾಪಿಲ್ಲಿಯಾಯಿತಂತೆ. ಒಂದೇ ಉಸುರಿಗೆ ಓಡುತ್ತಾ ಹೊರಕ್ಕೆ ಬಂದ ಳಂತೆ. ಹಾದಿಯಲ್ಲಿದ್ದವರು ಆಕೆಯನ್ನುನೋಡಿ ಮಾತಾಡದೆಓಡಿಹೋಗಿ ವೈದ್ಯರೊಬ್ಬ ರನ್ನು ಕರೆತಂದರಂತೆ. ವೈದ್ಯರು ಬಂದಕೂಡಲೆ ಆಕೆಗೆ ತಣ್ಣೀರೆರಚಿ ಏನಾಯಿತಮ್ಮ ಎಂದರಂತೆ, ಏನೂ ಇಲ್ಲ ಮನೆಗೆಕಳ್ಳರು ಬಂದಿದ್ದಾರೆ. ಎಂದು ಹೇಳಿದಳಂತೆ. ಆಕೆ ಯನ್ನೂ ದಾರಿಗರನ್ನೂ ಶಪಿಸುತ್ತಾ ವೈದ್ಯರು ಹೊರಟು ಹೋಗಿ ಪೋಲೀಸಿನವನನ್ನು ಕಳಿಸಿದರಂತೆ. ಅವರು ಬರುವ ವೇಳೆಗೆ ಮನೆಯಲ್ಲಾರೂ ಕಳ್ಳರು ಸಿಗಲಿಲ್ಲವಂತೆ. ಹಾಗಾಗಿ ಮನೆಯವರು ಬರುವ ತನಕ ಕಾವಲಿಗಾಗಿ ಈ ಪೋಲೀಸಿನವನನ್ನು ಬಿಟ್ಟು ಹೋಗಿದ್ದರಂತೆ.

ಇದನ್ನು ಹೇಳಿ ಪೋಲೀಸಿನವನು ಠಾಣೆಗೆ ಹಿಂತಿರುಗಿ ಹೋದನು. ಮನೆಯ ಲ್ಲೆಲ್ಲಾ ಪರೀಕ್ಷಿಸಿದ ಮೇಲೆ ಹೋದ ಸಾಮಾನುಗಳ ಪಟ್ಟಿಯೊಂದನ್ನು ಪೋಲೀಸಿನವ ರಿಗೆ ಕಳುಹಿಸಬೇಕೆಂದು ಹೇಳಿ ಹೋದನು.

ಇದನ್ನೆಲ್ಲಾ ಕೇಳಿದ ಮೇಲೆ ಈ ಪತ್ತೇದಾರಿ ಕತೆಗಳು, ದಿಟವಾಗಿಯೂ ನಡೆದಿರಬಹುದೆಂದು ನನಗೆ ಧೃಢವಾಗಿನಂಬಿಕೆ ಹುಟ್ಟಿತು.

ಮನೆಯೊಳಗಿನ ಕೊಠಡಿಗಳನ್ನೆಲ್ಲಾ ಹುಡುಕಲಾರಂಭಿಸಿದೆವು. ಇಲ್ಲಿನ ತನಕ ಕಳ್ಳರು ಸ್ವಲ್ಪ ಮಟ್ಟಿಗಾದರೂ ಬುದ್ಧಿವಂತರೆಂದು ತಿಳಿದುಕೊಂಡಿದ್ದೆ. ಕಡೆಯ ಅಧ್ಯಾಯದ ತನಕ ಸಿಗುವುದಿಲ್ಲವೆಂದಂದು ಕೊಂಡಿದ್ದೆ. ಆದರೆ ನಮ್ಮ ಮನೆಗೆ ಬಂದ ಕಳ್ಳರು ಕತ್ತಿನಮೇಲೆ ಬರೀ ತ್ಯಾಗದವುರದವರೇ ಆಗಿದ್ದಿರಬೇಕು. ವೊಟ್ಟ ವೊದಲು ಹಗಲು ನಾಲ್ಕುವರೆ ಗಂಟೆಯಲ್ಲಿ ನಮ್ಮ ಮನೆಗೆ ಇಳಿಬಿದ್ದಿದ್ದರು. ಆ ವೇಳೆಯಲ್ಲಿ ರಸ್ತೆಯಲ್ಲೆಲ್ಲಾ ಜನರು, ಅಲ್ಲದೆ ನಾವು ಹಿಂತಿರುಗುವ ಒಂದು ಗಂಟೆಯ ಮುಂಚೆ ಮಾತ್ರ ಒಳಹೊಕ್ಕಿದ್ದರು. ಅಲ್ಲದೆ ಮುಸುರೆ ತಿಕ್ಕುವವಳಿಗೋಸುಗ ಹಿತ್ತಿಲ ಬಾಗಿಲನ್ನು ತೆರೆದಿದ್ದಾಗ ಹೆಬ್ಬಾಗಿಲನ ಬೀಗವನ್ನು ಒಡೆಯಲು ಬಹಳ ಕಷ್ಟಪಟ್ಟಿದ್ದರು. ಒಳಗೆ ಹೋದವರು ಪುಸ್ತಕ ತುಂಬಿದ್ದ ಬೀರುವನ್ನು ಹುಡುಕಾಡಿದ್ದರೇ ವಿನಹಾ ಮಂಚದ ಕೆಳಗಿದ್ದ ಟ್ರಂಕನ್ನು ನೋಡಿಯೂ ಇರಲಿಲ್ಲ. ಕನ್ನಡಿ ಹತ್ತಿರ ಇಟ್ಟಿದ್ದ ಒಂದುಬಾಚಣಿಗೆ ಪೆಟ್ಟಿಗೆಯನ್ನು ಒಡೆಯಲು ಎಷ್ಟೋ ಸಾಹಸ ಪಟ್ಟರೂ ಪ್ರಯೋಜನಕಾರಿಯಾಗಿರಲಿಲ್ಲ. ಬಾಚಣಿಗೆ ಪೆಟ್ಟಿಗೆ ಬೀಗವಿಲ್ಲದಿದ್ದರೂ ಅದನ್ನು ಒಂದೊಂದು ವೇಳೆ ತೆಗೆಯುವುದು ನಮಗೂ ಕಷ್ಟವೇ ಹೌದು. ಆದರೂ ಪೆಟ್ಟಿಗೆಯನ್ನು ಒಡೆಯುವ ಬದಲು ಅದನ್ನೇ ಜೇಬಿನಲ್ಲಿಟ್ಟುಕೊಂಡು ಹೋಗುವುದಕ್ಕೂ ಅವರಿಗೆ ತೋಚಿರಲಿಲ್ಲ. ನನ್ನ ಕೊಠಡಿಯಲ್ಲಿ ಹತ್ತುರೂಪಾಯಿ ನೋಟು ಇಟ್ಟಿದ್ದ ಬನಿಯನೊಂದನ್ನು ಹೊರತು ಮಿಕ್ಕ ಬಟ್ಟೆಗಳನ್ನೆಲ್ಲಾ ಹುಡುಕಿದ್ದರು. ಬ್ಯಾಂಕಿನ ಚೆಕ್ಕು ಪುಸ್ತಕವೊಂದನ್ನು ಮಾತ್ರ ಕದ್ದುಕೊಂಡು ಹೋಗಿದ್ದರು. ಆ ಪುಸ್ತಕದಿಂದ ಅವರಿಗೇನೂ ಪ್ರಯೋಜನವಾಗುವಂತೆ ಕಾಣಿಸುವುದಿಲ್ಲ. ಏಕೆಂದರೆ ನಾನು ಅದನ್ನು ಉಪಯೋಗಿಸಿದರೇ ಬ್ಯಾಂಕಿನವರು ಹಣ ಕೊಡಲು ಇಲ್ಲವೆಂದೆನ್ನುವ ಸ್ಥಿತಿ ಒದಗಿತ್ತು. ಇದಲ್ಲದೆ ನಮಗೆ ನಷ್ಟವಾದ ವಸ್ತುಗಳೆಂದರೆ ಒಂದು ಛತ್ರಿ-ಯಾರೋ ಹಿಂದಿನತಿಂಗಳು ಮರೆತು ಹೋಗಿದ್ದರು ನಮ್ಮನೆಯಲ್ಲಿ-ಪುಸ್ತಕ ಭಂಡಾರದಿಂದ ತಂದಿದ್ದ ಪುಸ್ತಕ ಒಂದು. ಇವೆರಡೇ ಹೋಗಿದ್ದುವು.

ಪೋಲೀಸ್ ಠಾಣೆಗೆ ಹೋಗಿ ಏನೂ ಕಳುವಾಗಿಲ್ಲ ಎಂದು ಬಂದೆ.

ರಾತ್ರಿ ಊಟವಾಗಿ ಮಲಗುವ ಹೊತ್ತಿಗೆ ನನ್ನ ಹೆಂಡತಿ ಕೇಳಿದಳು "ಅಲಾ ಅಂದ್ರೆ ನಿಮ್ಮ ಕರಿ ಅಂಗಿ ಎಲ್ಲಿಕಾಣಿಸಲೇ ಇಲ್ಲವಲ್ಲ" ಎಂದು. ಅದು ಯಾಕೆ? ಅದರಲ್ಲೇನಿತ್ತು ಎಂದೆ. "ಮೊನ್ನೆ ಸೊಸೈಟಿಯಿಂದ ತಂದ ಸಾಲದ ರೂಪಾಯಿಯೆಲ್ಲಾ ಅದರಲ್ಲಿಟ್ಟಿದ್ದೆ ಎಂದಳು. ನನ್ನ ಎದೆ ಜಗ್ಗೆಂದಿತು. ದಿಟವಾಗಲೂ ನಾನು ಆ ಅಂಗಿಯನ್ನು ನೋಡಿರಲಿಲ್ಲ. ಸರ್‍ರನೆದ್ದು ಕೊಠಡಿಗಳಲ್ಲೆಲ್ಲಾ ಹುಡುಕಿದೆವು. ಎಲ್ಲಿಯೂ ಇಲ್ಲ. ಅಯ್ಯೋ ಕೆಟ್ಟೆನಲ್ಲಾ ಹೋಯಿತೇ ಮುನ್ನೂರು ರೂಪಾಯಿಯೆಂದು ಹೊಡೆದುಕೊಳ್ಳುವ ಹೊತ್ತಿಗೆ ನೆನಪು ಬಂತು. ಮದುವೆಯ ಮನೆಗೆ ಕರಿ ಅಂಗಿಯನ್ನು ಹಾಕಿಕೊಂಡು ಬಂದ ಅವಸರದಲ್ಲಿ ಅಂಗಿಯನ್ನು ಆ ವಕ್ರ ಕುರ್ಚಿಯ ಮೇಲೆ ಹಾಕಿದ್ದೆನೆಂದು. ಹೋಗಿ ಹುಡುಕಲು ಅದೇ ತೊಟ್ಟಿಗೆ ಕುರ್ಚಿಯ ಮೇಲೆ ಅಂಗಿಯೂ ಇತ್ತು. ಅಂಗಿಯ ಜೇಬಿನೊಳಗೆ ಹಣವೂ.... ಇತ್ತು.

# ವಾರ್ತಾ ವಿಹಂಗಮಗಳು

ಅಖಿಲ ಭಾರತ ಕಾಂಗ್ರೆಸ್ಸಿನ ಹೆಸರಿನಲ್ಲಿ ದೌರ್ಜನ್ಯದ ಕೃತ್ಯಗಳು ಹಿಂದೂಸ್ಥಾನದ ಮೂಲೆ ಮೂಲೆಗಳಲ್ಲೂ ನಡೆಯಲ್ಪಡುತ್ತಿವೆಯೆಂದು ಸುದ್ದಿಗಳು ಬರುತ್ತಿವೆ. ಜವಾಬ್ದಾರಿಯುತ ಕಾಂಗ್ರೆಸ್ ಪ್ರಮುಖರೆಲ್ಲರೂ ಕಾರಾಗಾರದಲ್ಲಿರುವಾಗ, ಅವರ ಹೆಸರಿನಲ್ಲಿ ಬೇಜವಾಬ್ದಾರಿಯ ಕೃತ್ಯಗಳು ನಡೆಯುತ್ತಿರುವುದು ಶೋಚನೀಯವೇ ಸರಿ. ಇಂತಹ ಕಾರ್ಯಗಳಿಂದ ಸ್ವಾತಂತ್ರ್ಯ ಸಿಗುವುದೇ ಎಂದು ಶಂಕೆಬರುವುದು ಸಹಜ. ಇವುಗಳಿಂದ ದೇಶಕ್ಷೇಮಕ್ಕೆ ಧಕ್ಕೆ ತಗುಲುವುದು ಖಂಡಿತ.

ಆದರೂ ಯಾವ ಹುತ್ತದಲ್ಲಿ ಯಾವ ಹಾವಿದೆಯೋ ? ಕಂಡವರಾರು ?

* * * *

ಅಮೆರಿಕಾದಲ್ಲಿ ೧೯೪೪ನೆಯ ಇಸವಿಯ ಯುದ್ಧಕ್ಕೆ ಈಗಾಗಲೆ ತಯಾರಾಗುತ್ತಿದ್ದಾರೆಂದು ಅಧ್ಯಕ್ಷರ ಹೇಳಿಕೆಯಿಂದ ಗೊತ್ತಾಗುತ್ತದೆ. ಇಂಗ್ಲೀಷಿನವರಿಗೆ ಒಂದು ಪ್ರತೀತಿಯುಂಟು. ೧೯೧೪-೧೮ರ ಸಂಗ್ರಾಮಕ್ಕೆ ಅವರು ಈಗ ಸಿದ್ಧರಾಗಿದ್ದಾರೆಂದು.

ಹಾಗಾಗಿ ಮುಂಜಾಗ್ರತರಾದ ಅಮೆರಿಕನ್ನರು ಹುಷಾರಾಗಿ ವ್ಯವಸ್ಥೆಗೊಳಿಸುವ ಆಂಗ್ಲೇಯರೂ ಒಟ್ಟುಗೂಡಿದರೆ ಜಯವಲ್ಲದೆ ಮತ್ತೇನು?

* * * *

ಬೆಂಗಳೂರಿನಲ್ಲಿ, ಮಿಕ್ಕಿತರ ಕಡೆಗಳಲ್ಲಿಯೂ ಕೂಡ ವಿದ್ಯಾರ್ಥಿಗಳ ಮುಷ್ಕರವು ಯಥಾಸಾವಕಾಶವಾಗಿ ನಡೆಯುತ್ತಿದೆಯಂತೆ. ಹಾಗೆ ಮುಷ್ಕರಹಿಡಿದ ವಿದ್ಯಾರ್ಥಿಗಳಲ್ಲನೇಕರು ಧರ್ಮ ಸಂಸ್ಥೆಗಳಲ್ಲಿ ಊಟಮಾಡುತ್ತಿದ್ದರೆಂದೂ ವಿದ್ಯಾರ್ಜನೆಯ ನೆಪವು ಇಲ್ಲದುದರಿಂದ ಅವರಿಗೆ ಅನ್ನಸಿಗುವುದು ಅಭಾವವಾಗಿದೆಯೆಂದೂ ಕೇಳುತ್ತೇವೆ.

ಸ್ವತಃ ಸಿದ್ಧ—ಉಪವಾಸದ ಮುಷ್ಕರ.



ಬಸ್ಸು ಹತ್ತುವವರಿಗೆ ಒಂದು ಎಚ್ಚರಿಕೆ

# ತುಂಡು ಕವಿ

ಮೊನ್ನೆ ನಾನು ಪಬ್ಲಿಕ್ ಲೈಬ್ರೆರಿಯಿಂದ ಒಂದು ಪುಸ್ತಕ ಎರವಲು ಪಡೆದೆ. ಅಂದರೆ ಇದನ್ನೇ ದೊಡ್ಡ ಸಾಹಸ ಕಾರ್ಯ ಅಂತ ನಾನು ನಿಮ್ಮ ಮುಂದೆ ವಿವರಿಸುತ್ತಿಲ್ಲ. ಅನೇಕ ಲೈಬ್ರೆರಿಗಳಲ್ಲಿ ಗಾಜಿನ ಮೂಲಕ ಪುಸ್ತಕದ ಬೆನ್ನ ಮೇಲೆ ಲಿಖಿತವಾಗಿರುವ ಹೆಸರನ್ನು ಕಂಡು ಹಿಡಿದು ನಿಧಿಯನ್ನು ಕಾಯುವ ಭೂತದಂತಿರುವ ಗುಮಾಸ್ತೆಯವರಿಂದ ಬೀಗ ತೆಗಿಸಿ ಬೇಕಾದ ಪದಾರ್ಥದೊಂದಿಗೆ ಹೊರ ಬರುವುದೇ ಒಂದು ಭಗೀರಥ ಪ್ರಯತ್ನ, ಒಪ್ಪಿದೆ. ಆದರೆ, ನನ್ನ ವಿಷಯ ಅನಂತರದ್ದು. ಪುಸ್ತಕವನ್ನು ಬಿಚ್ಚಿ ಹಾಳೆಗಳನ್ನು ತಿರುವಿ ಹಾಕಿದಾಗ ನನ್ನ ಕಣ್ಣಿಗೆ ಬಿದ್ದ ಒಂದು ಸೋಜಿಗ!

ಹಲವಾರು ಜನ ಆ ಪುಸ್ತಕವನ್ನು ಆಗಲೇ ಓದಿದ್ದರು. ಅರಶಿನ, ತುಲಸೀ ಪತ್ರ, ದವನ, ನವಿಲುಗರಿ ಚೂರು. ಎಣ್ಣೆಕಾಗದ, ಗಾಂಧೀಚಿತ್ರ, ಜೇಡರನ ಕಾಲು, ಜಿರಲೆಯ ಕಳೇಬರ, ಮುಂತಾದ ವಾಚನಾ ಚಿಹ್ನೆಗಳು ಹಾಳೆಗಳ ಸಂದಿನಲ್ಲಿದ್ದು, ಓದಿದವರ ಕುಲಗೋತ್ರ, ವಯಸ್ಸು ಮುಂತಾದವುಗಳನ್ನು ನನಗೆ ಪರಿಚಯಮಾಡಿದವು.

ಆದರೆ, ಇಂತಹ ಬುಕ್ ಮಾರ್ಕ್‌ಗಳು ಸರ್ವೇ ಸಾಧಾರಣ. ನನ್ನ ಪುಸ್ತಕದಲ್ಲಿ ಸುಮಾರು ೨೦ನೇ ಪುಟದಲ್ಲಿ ಕತ್ತೆ ಕಾಗದದ ಮೂರು ಹಾಳೆಗಳಿದ್ದುವು. ಅವುಗಳನ್ನು ಯಾರೋ ಮರೆತು ಅಲ್ಲಿಟ್ಟು ಈಗ ತಡಕಾಡುತ್ತಿರಬೇಕೆನಿಸಿತು, ಓದಿ ನೋಡಿದಮೇಲಂತೂ, ಆ ಅಪರಿಚಿತ ವ್ಯಕ್ತಿಯ ಮೇಲೆ ಅಪಾರವಾದ ಪೂಜ್ಯ ಭಾವನೆ ಮೂಡಿತು. ಕನ್ನಡ ಕುಲವನ್ನೇ ಉದ್ಧರಿಸಬಲ್ಲ ಕಾರಣ ಪುರುಷನ ಕರಡು ಕವನಗಳು ಆ ಹಾಳೆಗಳಲ್ಲಿದ್ದುವು. ಆತ ಅಷ್ಟು ಮಹಾನುಭಾವನಾಗಿದ್ದರೂ ಕೂಡ, ಆತ್ಮ ವಿಶ್ವಾಸ ಸಾಲದೆ ಆಂದೋಳನಕ್ಕೆ ಸಿಲುಕಿ ಇನ್ನೂ ಅಪ್ರಕಟಿತ ವೀರನಾಗಿಯೇ ಉಳಿದಿದ್ದನೆಂದು ನನಗೆ ತೋರಿತು. ಏಕೆಂದರೆ, ಅಲ್ಲಲ್ಲಿ ಆ ಹಾಳೆಗಳಲ್ಲಿ, "ನನ್ನಿಂದಸಾಧ್ಯ" "ಹೇ ಕಾವ್ಯ ದೇವಿ!"

"ಏಕೆ ಬಾರಳ್ಳೆ ಪ್ರಾಸ?" "ಅಯ್ಯೋ" ಎಂದು ಮುಂತಾಗಿ ಬಿಸುಸುಯ್ದಿದ್ದನು. ಆತನನ್ನು 'ನು' ಕಾರದಿಂದಲೇ ವಿವರಿಸುವ ಧೈರ್ಯ ನನಗೆ ಬಂದದ್ದು "ಏಕೆ ಬಾರಳ್ಳೆ ಪ್ರಾಸ?" ಎಂಬ ಉದ್ಗಾರದಿಂದ ಪ್ರಾಸವನ್ನು 'ಳ್ಳೆ' ಎಂದು ಸಂಭೋಧಿಸಬೇಕಾದರೆ, ಆ ಬರಹ ಬಳೆಗೈಯದಾಗಿರಲಾರದು.

ಅಲ್ಲದೆ, ಆ ಹಾಳೆಗಳಲ್ಲಿದ್ದುದೆಲ್ಲವೂ ತುಂಡು ಕಾವ್ಯಗಳು. ಸ್ಫೂರ್ತಿ ಬಂದಾಗ, ಕವಿ ಕಲಿಯಾದಾಗ, ಖುಷಿ ತನ ಚಿಮ್ಮಿದಾಗ, ಕೋಗಿಲೆಯ ದನಿ ಕಿವಿಯ ಬಾಗಿಲು ಬಡಿದಾಗ,-ಒಂದು ಪಂಕ್ತಿ ಹೊರ ಹೊಮ್ಮಿ ಕಾಗದದಲ್ಲಿ ಕಾಣಿಸಿಕೊಂಡಿರಬೇಕು. ಮೋಡದ [illegible]ಯಿಂದ ಸೂರ್ಯದೇವನು ಇಣಿಕಿ ನೋಡಿದಾಗ, ಒಂದು

ವಿಶೇಷಣ, ಪೂರ್ಣಿಮಾ ಚಂದ್ರನ ಸುತ್ತ ನಕ್ಷತ್ರಗಳು ನಲಿದಾಡಿ ನೀಲಾಕಾಶದಲ್ಲಿ ಕಣ್ಣು ಮುಚ್ಚಲು ಪ್ರಾರಂಭಿಸಿದಾಗ, ಒಂದು ಕಿರುಸಾಲು-ಹೀಗೆ ಆ ಕವಿಯು ಭಾವನಾತರಂಗಗಳಿಗೆ ವಾಗ್ದೇವಿ ಗರಿ ಗೂಡಿಸಿದ್ದಳು.

ಆತನ ಹೇಸರೇನು, ಆತನು ಉಸಿರ್ ವಂತನಾಗಿ ಓಡಾಡುತ್ತಿರುವನೆ—ಎಂಬ ಪ್ರಶ್ನೆಗಳಿಗೆ ಆ ಹಾಳೆಗಳು ನನಗೆ ಯಾವ ಉತ್ತರವನ್ನೂ ಕೊಡಲಿಲ್ಲ. ಬಸ್ಸಿನಲ್ಲಿ ನಾನು ಪುಸ್ತಕವನ್ನು ಬಿಚ್ಚಿದಾಗ ಅವು ಹೊರಬಿದ್ದು ಗಾಳಿಯಲ್ಲಿ ತೇಲಾಡಿ ಅತ್ತಿತ್ತ ಸುಳಿದಾಡಿ ಗರಗರ ಸದ್ದು ಮಾಡಿ ಸುಮ್ಮನಾದವು ಅಷ್ಟೆ! ಆದರೂ, ಆ ಅಜ್ಞಾತ ಕವಿಯ ಮೆದುಳನ್ನು ಕನ್ನಡಿಗರಿಗೆ ಹಂಚಿ ಕೃತಾರ್ಥನಾಗಲು ನಾನು ತೀರ್ಮಾನಿಸಿದ್ದೇನೆ. ಆ ಹಾಳೆಗಳಲ್ಲಿದ್ದ ಪ್ರತಿಭೆಯ ಪುಡಿಗಳನ್ನು ಇಲ್ಲಿ ಪ್ರಕಾಶ ಪಡಿಸುತ್ತೇನೆ ಅವುಗಳನ್ನು ಯಾರು ಬೇಕಾದರೂ ತಮ್ಮ ಕವನಗಳಲ್ಲಿ ಉಪಯೋಗಿಸಿಕೊಂಡು, ಅವುಗಳಿಗೆ ಹೊಸ ಕಳೆ ಕೊಡಬಹುದು. ಇದಕ್ಕೆ ನನ್ನ ಅಭ್ಯಂತರವೇನೂ ಇಲ್ಲ, ಕನ್ನಡಮ್ಮನ ಕಂಠ ಹಾರಕ್ಕೆ ಈ ಮಣಿಗಳೂ ಸೇರಿದರೆ ಕೃತಾರ್ಥ. ಆಖಂಡ ಕವಿಗಳಿಗೂ ಅಮೃತತ್ವ ಲಭಿಸಿದ ಹಾಗಾಗುತ್ತದೆ.

"ಸೂರ್ಯ : ೧ ಬಾಂಬುಗಳ ತವರೂರು;
ಲ್ಯಾಂಪುಗಳ ಪಿರಿಯರಸ
೨ ತಾರೆಗಳ ತಾತ
೩ ರೇಗಿದತ್ತೆಯ ರಕ್ತ
ನಯನದಂತೆ
೪ ನೆರಳ ನೀಡಿವ ದೇವ

ಚಂದ್ರ
೧ ಅ ನೀ ಮಿ ಯಾ ನ ನೆ ಚಂದ್ರೆ ?
೨ ಗೋಳಾದ ಗಾಳಿ ಪಟದಾರಕಿತ್ತಲೇವಂತೆ !

ಹಿಮಾಲಯ
೧ ಹತ್ತಿದವರಿಗಿತ್ತೆ, ಚಟ್ಟವೆಂದೊರಲುವಾ ಕಡುಬಿಟ್ಟ
೨ ಮಹಾಪುರಾತನ ಪಂಕದೋಳ್ ಪವಡಿಸಿಹ ಮಹಿಷಗಳ ಮಾಲೆ !
೩ ಗೂನುಬೆನ್ನಿನ ಸಾಲು
೪ ಬಂಡೆಗಳ ದೊಂಬಿ
೫ ರಕ್ಕಸರೆಕ್ಕಲ್ ರಾಜಾ ಎಂದು ಗೋಲಿಯಾಡಲು ತಂದ ಬಂಡೆಗಳ ತಂಡ

ಜೋಗ
೧ ಎಂಥಾವತಿ ಶರಾವತೀ !
೨ ಬೆಳ್ಗರಿ ನಿರಂತರಂ ಧುಮುಕಿ ಧುಮುಕಿ ನೆಗೆದಂತೆ
೩ ಶ್ವೇತಾಂಬರದ ಜಾತ್ರ ಪಾತಾಳಕಿಳಿದಂತೆ
೪ ಬಿಳಿ ಅರಿವಿ ಹಿರಿ ಇರುವೆ ಸಾಲಾಗಿ ಸರಿದಂತೆ
೫ ರಾವಣನ ಹಾಸುಗೆಯ ಕತ್ತರಿಸಿ ಕಿತ್ತೆಸೆದು ವಾನರರು ಕೋಪದಲಿ ಹತ್ತಿಯನು ಸುರಿದಂತೆ

ಕಬ್ಬು
೧ ಸಕ್ಕರೆಯ ಪೊಟ್ಟಣಕೆ
ಗರಿ ಬೇರು ಬಂದಂತೆ
೨ ಸಿಹಿ ಹಸುರು ಡೊಂಕಾ
ಗಿ ಗೆಣೆಗೂಡಿ ಬೆಳೆದಂತೆ

ಗುಲಾಬಿ
೧ ಗು ಲಾ ಮು ತ ನ ದ ಲಿ
ಒಂದು ಲಾಬಿಯಲ್ಲಿ ನಿ
ಲುವ ಹೂ!
೨ ? ? ? ?

ಕುದುರೆ
೧ ಹುರುಳಿ ಎಂಜಿನ ತಂದು
ಲಾಂಗೂಲ ಕಿವಿ ಮೂತಿ
ಕೈಕಾಲು ಲಗತ್ತಿಸಿ, ಕೆನೆ
ಕಲಿಸಿ ಬಿಟ್ಟಂತೆ!

ಬೆಕ್ಕು
೧ ಸಂಕ್ಷೇಪ ವ್ಯಾಘ್ರವೇ।

ಹಾರ್ನ
೧ ಹಾ! ರ್ನ! ಹಾ! ರ್ನ!
ಎಂದೆಂಬ ಚೀಲವೇ!

ಹಾರ್ಮೋನಿಯಂ
೧ ದುರಾದಿ ದುರಂತ
ದುರ್ವಧ್ಯವಾದ್ಯ!
೨ ಒತ್ತಿದರೆ ಸತ್ತೆ ಎಂದೊ
ದುರ್ವ ರಲುವುದು ನಿತ್ಯ!

ಮೇಲೆ ಕೊಟ್ಟಿರುವ ವಾಕ್ಯರತ್ನಗಳನ್ನು ತಮ್ಮ ವಚನಗಳಲ್ಲಿ ಪೋಣಿಸಿಕೊಳ್ಳಲು ಎಲ್ಲರಿಗೂ ಸ್ವಾತಂತ್ರ್ಯವುಂಟೆಂದು ಹೇಳ ಲಿಚ್ಛಿಸುತ್ತೇವೆ. ಹೇಗಾದರೂ, ಕನ್ನಡ ಕೊಳ್ಳಿತಾದರೆ, ತೀರಿತು.... ಆ ಹಾಳೆಗಳ ಒಡೆಯರು ತಕ್ಕ ರುಜುವಾತುಗಳೊಂದಿಗೆ ಬಂದರೆ, ಅವುಗಳನ್ನ ಹಿಂದಕ್ಕೆ ಕೊಡ ಲಾಗುವುದು ...... ನಾ. ಕ.

---

# ಊರ ಪದ್ಯಗಳು

## ಅಗಸರವನು

ಅಗಸನೊಬ್ಬ ನೂರಲಿರುವನು ॥ ಪ ॥
ನಾಳೆ ಎಂಬುದವನ ಮಂತ್ರ ।
ಇಗೊ ಬಂದೆ ಎನುತಲಿರುವ ॥ ಅ ॥ ಪ ॥

ತೊಟ್ಟ ತೊಡಿಗೆ ತೊಡುವನಲ್ಲ ।
ಉಟ್ಟ ಉಡಿಗೆ ಉಡುವನಲ್ಲ ॥
ಹುಟ್ಟ ಬಂದ ಕರ್ಣನಂದದಿ ।
ಸೃಷ್ಟಿಯಲ್ಲಿ ಮೆರೆಯುತಿರುವ ॥ ೧ ॥
ರವಿಗೆ ಮೊದಲು ಎದ್ದು ಅವನು ।
ಅರಿವೆಗಳನು ಹೊರಿಸಿಕೊಂಡು ॥
ಕೆರೆಯ ಬಳಿಗೆ ಪೋಗಿ ಒಗೆದು ।
ಹರುಷದಿಂದ ಹೊಗೆಯ ಸೇದುವ ॥ ೨ ॥

ಸಾಬರ್ಹೊಬ್ಬ ಬಂದರಾಗಲೀ ।
ಕಾಮನ್ನೊಬ್ಬ ನಡೆದರಾಗಲೀ ॥
ವೇಷ ವೇಷ ಹಾಕಿ ತಾನು !
ನಲಿದು ನಲಿಸಿ ಕುಣಿಯುತಿರುವ ॥ ೩ ॥

ಕತ್ತೆಯೊಡನೆ ಮೆರೆವ ಮನುಜ ।
ಅತ್ತೆ ಕೈಲಿ ಇಸ್ತ್ರಿ ಮಾಳ್ಪ ॥
ಹೊತ್ತು ಗೊತ್ತು ಏನನರಿಯ ।
ಕಿತ್ತು ಹರಿವ ಸಿಕ್ಕ ವಸ್ತ್ರ ॥ ೪ ॥




ಶಾಲೆಯ ಗೋಡೆಗಳೊಂದೊಂದನ್ನು ಈ ರೀತಿ ಕೈಯಿಂದ ಸಿಂಗರಿಸುವ ಬದಲು
ಇದೇ ಚಿತ್ರವನ್ನು ಅಚ್ಚು ಮಾಡಿಸಿ ಅಂಟಿಸಿದರೆ ಸುಲಭವಲ್ಲವೇ ?

# "ಕನ್ಯಾಲೀನ"

ಎಲ್ಲೆಲ್ಲಿ ನೋಡಿದರೂ ಅಳಿಯನ ಶಿಕಾರಿ, ಹುಡುಗನ ಹುಡುಕಾಟ, ವರಾನ್ವೇಷಣ, ಇತ್ಯಾದಿಯಾಗಿಯೇ ಕಣ್ಣಿಗೆ ಬೀಳುತ್ತವೆ. ಕನ್ಯಾದಾನ, ವಿವಾಹ, ಮದುವೆ ಎಲ್ಲವೂ ಕನ್ಯೆಯನ್ನೇ ಅವಲಂಬಿಸಿರುತ್ತವೆ. ಬಡಪಾಪಿ ಅಳಿಯ ಎನ್ನಿಸಿಕೊಳ್ಳುವವನ ಕಷ್ಟ ಯಾರೂ ನೋಡಲಾರರು, ಅವನಿಗೆ ಪಶ್ಚಾತ್ತಾಪವನ್ನೂ ಸೂಸರು. ನಮ್ಮ ಅಂಧ ಸಮಾಜಕ್ಕೆ ಇದಕ್ಕಿಂತ ನಿದರ್ಶನಬೇಕೆ.

ಮೊನ್ನೆದಿನ ನನ್ನ ಸ್ನೇಹಿತನೊಬ್ಬನು, ಅವಿವಾಹಿತನು, ಪಾರ್ಕಿನಲ್ಲಿ ಸಿಕ್ಕ ಮುಖದ ತುಂಬ ಮೂಗುದ್ದ ಮಾಡಿಕೊಂಡು, ಹಾಳುಮುಖ ಮರೆಸಿಕೊಳ್ಳಲೊ ಎಂಬಂತೆ ಒಂದು ಮಫ್ಲರ್ ಹೊದ್ದುಕೊಂಡು ಜನವಿಲ್ಲದ ಒಂದು ಮೂಲೆಯಲ್ಲಿ ಮೂಲಾಕ್ರಾಂತನಾಗಿದ್ದ. "ಏನೊ ಹೀಗೆ ಕೂತುಬಿಟ್ಟೆ?" ಯಾರಾದರೂ ಹೋಗಿ ಬಿಟ್ಟರೇನೊ-ತಿಂಡಿ ಕೊಡಿಸದೇ" ಎಂದು ಯಥಾಪ್ರಕಾರ ಕುಚೋದ್ಯ ತೆಗೆದೆ.

ತಡೆಯಿಲ್ಲದೇ ಮೇಲಿಂದ ಮೇಲೆ ಬಿಕ್ಕಿಬಿಕ್ಕಿ ಅತ್ತು ಸುರಿದು, ಕಕ್ಕಾವಿಕ್ಕಿಯಾದ. ಇದಕ್ಕೆ ತುಂಬಾ ಗೂಢಕಾರಣವಿರಬೇಕೆಂದೂ ನಾನು ಮೊದಲು ಮಾಡಿದ ವಿಧಾನ ಸರಿಯಲ್ಲವೆಂದೂ ತೋರಿ, ಬೇರೆ ರೀತಿಯಾಗಿ ಮಾತು ಶುರುಮಾಡಿದೆ. "ಏನೋ ವೆಂಕು ನೀನು ಗಂಡು ಹುಡುಗಿಯರಂತೆ ಹೀಗೆ ಅಳಬಹುದೇ. ವೇದಾಂತ ತಿಳಿಯದೇ "ಅವಶ್ಯ ಮನುಭವ್ತೋಕ್ತಂ' ತಿಳಿಯದೆ? ಯಾವಕಾರಣದಿಂದ ಹೀಗೆ ದುಃಖಿಸುವೆ. ಮಿತ್ರರೊಳು ಹೇಳಿಕೊಂಡರೇ ದುಃಖವು ಅರ್ಧವಾಗುವುದು ಎಂಬುದನ್ನು ಅರಿಯೆಯಾ? ಹೀಗೆಲ್ಲಾ ಪುಸ್ತಕ ಬರೆದಹಾಗೆ ಹೇಳಲಾರಂಭಿಸಿದೆ. ಇನ್ನೂ ಅಳುವು ಹೆಚ್ಚಾಯಿತು. "ನನ್ನನ್ನು ನೋಡಿದರೆ ನಿನಗೆ ಹಾಸ್ಯಕಣೊ, ಅದಕ್ಕೆ ಇಷ್ಟು ವ್ಯಾಕರಣ ಮಿಶ್ರವಾಗಿ ಮಾತನಾಡುತ್ತೀ" ಎಂದು ಅಳುತಳುತಾ, ಮಾತು ಮಾತಿಗೂ ಸೊರಗುಟ್ಟುತ್ತಾ ಉಸುರಿದ. ಓಹೋ! ಇದೇನೊ ವಿಪರೀತಕ್ಕಿಟ್ಟುಕೊಂಡಿದೆ ಇದಕ್ಕೆ ಮೌನವೇ ಮದ್ದು, ಮೌನೇನ ಮಾತಂ ನಾಸ್ತಿ ಎಂಬಂತೆ ಈಗ ಸುಮ್ಮನಿರುವುದು ಒಳ್ಳೆಯದು, ಎಂದು, ಅವನ ಜತೆಗೆ ನಾನೂ ಮೆಲ್ಲ ಮೆಲ್ಲಗೆ ಎಂಜಿನ್ನು ಹೊರಡುವಂತೆ ಬಿಸುಸುಯ್ದು, ಉಸಿರಾಡಲಾರಂಭಿಸಿದೆ.

ಒಂದೆರಡು ನಿಮಿಷದ ಈ ಹಿಮ್ಮೇಳದಿಂದ ವೆಂಕುವು ಸ್ವಲ್ಪಮಟ್ಟಿಗೆ ಅಳುವನ್ನು ಕಡಿಮೆಮಾಡಿ ಅರ್ಥವಾಗುವಂತೆ ಮಾತನಾಡಲಾರಂಭಿಸಿದ. ಹಾಗೆಯೇ ಹೇಳತೊಡಗಿದ,

"ನೋಡೋ ಮೊನ್ನೆ ಹೆಬ್ಬಿಯಿಂದ ಒಬ್ಬರು, ಮನೆಗೆ ಬಂದಿದ್ದರು. ನೋಡುವುದಕ್ಕೆ ದೊಡ್ಡ ರುಮಾಲು ಹತ್ತು ಕಡಕು, ಮುಖ್ಯ ಶೆಟ್ಟಿ ಪುಂಗವರಂತಿದ್ದರು. ಸರಿ! ನಮ್ಮಪ್ಪನ ಹತ್ತಿರ ಬಾಕಿ ವಸೂಲಿಗೆ ಬಂದಿದ್ದಾರೆ ಎಂದಂದುಕೊಂಡು, ನಾನು ಶುರು ಮಾಡಿದೆ "ನಮ್ಮ ತಂದೆ ಇನ್ನೂ ಮನೆಗೆ ಬಂದಿಲ್ಲ. ಸುಮಾರು ಮೈಸೂರಿಗೆ ಹೋಗಿರಬಹುದು. ಹೋಗಬೇಕು ಎಂದು ಹೇಳುತ್ತಿದ್ದರು. ನಿಮ್ಮ ಅಡ್ರೆಸ್ಸು ಕೊಟ್ಟರೆ ಅವರು ಬಂದ ಕೂಡಲೇ ಬಂದು ನೋಡುವಂತೆ ಹೇಳುತ್ತೇನೆ. ತಮ್ಮ ನಾಮಧೇಯವೇನು ? ಶೆಟ್ಟರೆ"

ಕೇಳುವ ತನಕ ಕೇಳಿಕೊಂಡು ಆತ, "ಇಲ್ಲ ಮೂರು ದಿನಗಳ ಹಿಂದೆ ನಿಮ್ಮ ತಂದೆಯಿಂದಲೇ ಇವತ್ತು ಭೇಟಿಗಾಗಿ ಬರಬಹುದೆಂದು ಕಾಗದ ಬಂದಿತ್ತು. ಅದಕ್ಕಾಗಿ ಬಂದೆ" ಎಂದರು.

ಈ ನಮ್ಮ ಮಾತುಗಳನ್ನು ಕೇಳಿದ ನಮ್ಮ ತಂದೆ ಒಳಗಿಂದ ಹೊರಗೆ ಬಂದು "ಓಹೋ....ರಾಯರೇ ಬಂದುಬಿಟ್ಟಿರಾ, ಮೈಸೂರಿಗೆ ಹೋಗಬೇಕೆಂದಿದ್ದೆ ಆದರೆ ನಿಮ್ಮ ಭೇಟಿಯನ್ನು ನೆನಪು ಮಾಡಿಕೊಂಡು ಇಲ್ಲಿಯೇ ಇದ್ದುಬಿಟ್ಟೆ. ನಮ್ಮ ಚಿರಂಜೀವಿಗೆ ತಿಳಿಯದು" ಎಂದನ್ನುತ್ತಾ ಆತನನ್ನು ಸಕಲ ಮರ್ಯಾದೆಗಳೊಡನೆ ಒಳಕ್ಕೆ ಕರಕೊಂಡು ಹೋದರು. ನಾನೂ ಬಾಗಿಲ ಕಂಡಿಗೆ ಕಣ್ಣು ಇಟ್ಟುಕೊಂಡು ನೋಡಲಾರಂಭಿಸಿದೆ. ಏನು ಮಾತು ಗೊತ್ತೆ ಅವರಾಡುತ್ತಿದ್ದುದು.

"ಏನೋ ?"

"ಕನ್ಯಾಲೇನ"

ಆತನಿಗೆ ಒಂದು ಮಗಳಿದೆಯೆಂದೂ ಅದಕ್ಕೆ ನಾನು ಬಲಿಯಾಗಬೇಕೆಂದೂ, ಆತನ ಉದ್ಯಮ. ನಮ್ಮ ತಂದೆಗೆ ನಾನು ಎರಡನೇ ಮಗ. ಶುನಶ್ಶೇಫ ಅಂತ ಹೆಸರಿಡಲಿಲ್ಲ ಅಷ್ಟೆ. ನೋಡು ಆತನಿಗೂ ಆತನ ಮಗಳಿಗೂ ಬಲಿಕೊಡಲು ನಮ್ಮಪ್ಪ ಒಪ್ಪಿಬಿಟ್ಟು, ಎಲ್ಲವೂ ಸರಿ ಈ ಹುಡುಗ ಹುಡುಗಿಯನ್ನು ಒಪ್ಪಿದರೆ ಆಗಬಹುದು ಎಂದು ಕೂಡ ಹೇಳಿದರು.

ಅಲ್ಲದೆ ನಾನು ಒಪ್ಪಿಗೆಯನ್ನು ಕೊಡುವುದಕ್ಕೆ ಸ್ವಲ್ಪ ಕಷ್ಟವಾಗಬಹುದೆಂದೂ ಆದಕಾರಣ ನಾಲ್ಕಾರು ಚಿನ್ನು ಚಿನ್ನಾದ ಹುಡುಗಿಯರನ್ನು ತಂದು ಕೂಡಿಸಿದರೆ, ಬೇರೊಂದು ಹುಡುಗಿಯನ್ನೇ ವಧುವೆಂದು ತಪ್ಪು ತಿಳಿದುಕೊಂಡು ನಾನು ಒಪ್ಪಬಹುದೆಂದೂ ಆತನಿಗೆ ಸಲಹೆಯನ್ನು ಗೂಢವಾಗಿ ಕೊಡುತ್ತಿದ್ದರು. ಏನುಮಾಡಲೋ ಜಾತ ಕರ್ತೃಗಳೇ ಶತ್ರುಗಳಾದರೆ ಯಾವ ಕೆರೆಗೆ ಹೋಗಿ ಬೀಳಲೋ." ಎಂದು ಹೇಳುತ್ತಾ ಹೇಳುತ್ತಾ ತಿರುಗಿ ಸಾವೇರಿ ರಾಗ ಶುರುಮಾಡಿದ ಬುಸುಗುಟ್ಟುತ್ತಾ.

ಆಮೇಲೆ ಪಿಸುಮಾತಿನಲ್ಲಿ ಅವನಿಗೆ ಒಂದು ಉಪಾಯ ಹೇಳಿಕೊಟ್ಟೆ. ವಧುವನ್ನು ನೋಡಲು ಹೋದಾಗ ಆ ಉಪಾಯವನ್ನು ಮಾಡಹೇಳಿದೆ. ಹಾಗೆಯೇ

ಅವನೂ ಸಾಧಿಸಿದಂತೆ ಕಾಣುತ್ತದೆ ಏಕೆಂದರೆ "ಮದುವೆಯ ಮಾತು ಮುರಿದುಬಿತ್ತು" ಎಂದು ಆ ಊರಿನಿಂದಲೇ ಅವನೊಂದು ತಂತಿ ಕಳಿಸಿದ ನನಗೆ. ಆ ತಂತಿ ತಂದ ಅಂಚೆಯವನೂ ನಗುತ್ತ ನಗುತ್ತಲೇ ಇದ್ದ.

ಊರಿಗೆ ವಾಪಸು ಬಂದಮೇಲೆ ವೆಂಕುವನ್ನು ಕಂಡಾಗ ಅವನು ಈ ರೀತಿ ತನ್ನ ಪ್ರವಾಸ ಕ್ರಮವನ್ನು ಹೇಳಿದ.

"ನೋಡೋ ಊರಿಗೆ ಹೋಗುವತನಕ ಎಂದಿನಂತೆ ವಿಧೇಯ ಪುತ್ರನಂತೇ ನಡೆದುಕೊಂಡೆ. ನಮ್ಮ ತಂದೆಯೂ ಒಂದೆರಡು ಹೊಸಬಟ್ಟೆಗಳನ್ನು ಹೊಲಿಸಿ ಕೊಟ್ಟರು. ಭಾವೀ ಬೀಗರ ಮನೆಗೆ ಭಾವಿಗೆ ಬೀಳುವಂತೆ ನಾನೂ ನನ್ನ ತಂದೆಯೂ ಹೋದೆವು. ಯಥಾಪ್ರಕಾರ ಮೂರು ನಾಲ್ಕು ಹುಡುಗಿಯರು ಓಡಾಡುತ್ತಾ ಕಿಲ ಕಿಲ ಎಂದು ನಗುತ್ತ ಬೆಡಗುತ್ತಿದ್ದರು. ಎಲ್ಲೂ ಆಗುವಂತೆ ರವೆ ಉಪ್ಪಿಟ್ಟು, ಕಾಫಿ, ಬಾಳೇಹಣ್ಣು ಬಂದಿತು. ಅದನ್ನು ಮುಗಿಸಿದೆ. ನಂತರ ನಾಲ್ಕು ಹುಡುಗಿಯರೂ ಬಂದು ದೂರದಲ್ಲಿ ಕುಳಿತರು. 'ನಮ್ಮ ತಂದೆ ಎಲ್ಲಿ ಒಂದು ಹಾಡು ಹೇಳಿಸೋಣಾ ಗಲಿ' ಎಂದರು.

ನಾಲ್ವರೂ ಒಟ್ಟಿಗೇ ಶುರುಮಾಡಿದರು. ಈ ಥಳಕು ಬೆಳಕೆಲ್ಲಾ ಮುಗಿದ ಮೇಲೆ ನಾನು ಮೆತ್ತಗೆ ನೀನು ಹೇಳಿದಂತೆ ನಮ್ಮ ತಂದೆಗೆ ಹೇಳಿದೆ. ಹುಡುಗಿ ಸ್ವಲ್ಪ ಉದ್ದ ಅಂತ ಕಾಣುತ್ತೆ. 'ವರಸಾಮ್ಯ ನೋಡಿದರೆ ಒಳ್ಳೆಯದಲ್ಲವೇ ; ಹುಡುಗಿಯೇನೊ ಚೆನ್ನಎಂದೆ. ಬಲೆಗೆ ಬಿದ್ದ ಮಗ ಎಂದು ಅವರು ನಗುತ್ತಾ ಭಾವೀಬೀಗರಿಗೆ ಹೇಳಿದರು. ಅಷ್ಟು ಹೊತ್ತಿಗೆ ಹುಡುಗಿ ಯರೆಲ್ಲರೂ ಎದ್ದುನಿಂತುಕೊಂಡಿದ್ದರು. ಬೀಗರೂಕೂಡ ಅದಕ್ಕೇನು ನೋಡಬೇಕಾ ದದ್ದೆ ಎಂದರು. ನೀನು ಹೇಳಿದಂತೆ ತಕ್ಷಣ ನಾನು ಹೋಗಿ ಇದ್ದಿದ್ದರಲ್ಲಿ ವಯಸ್ಸಾದ ಹುಡುಗಿಯ ಹತ್ತಿರ ಆಶೆಯ ಕಣ್ತೆರೆದುಕೊಂಡು ವಿನಾಶದಬಾಯ್ಬಿಟ್ಟುಕೊಂಡು ಹೋಗಿನಿಂತುಕೊಂಡೆ. ನನಗೇನೂ ಒಪ್ಪಿಗೆ ಎಂದು ಕೂಡಲೇ ಹೇಳಿಯೂಬಿಟ್ಟೆ.

ಬೀಗರು ತಕ್ಷಣ ಎದ್ದರು, "ಅಲ್ಲ್ರೀ! ಆಕೆ ನನ್ನ ಈಗಿನ ಹೆಂಡತಿ. ಆಕೆಯಲ್ಲ ವಧು'' ಎಂದರು. ಹಾಗಂದವರು ದಿಟವಾದ ವಧುವನ್ನೂ ತೋರಿಸಲೇ ಇಲ್ಲ.

ಕನ್ಯಾಲೇನ ಸಂಧಾನ ಮುರಿದುಬಿತ್ತು.

ನಿನಗೆ ಎಷ್ಟು ಕೃತಜ್ಞನಾದರೂ ಸಾಲದು.

ಆದರೆ ಆತನಿಗೆ ಎರಡನೇ ಹೆಂಡತಿ ಚಿಕ್ಕ ವಯಸ್ಸಿನವಳು ಇದ್ದಾಳೆಂದು ನಿನಗೆ ಹೇಗೆ ಗೊತ್ತು ?"

* * * * *

ಅಯ್ಯೋ! ಮುಂಕೆ ನನಗೆ ಕೊಡಬೇಕೆಂದಿದ್ದ ಹುಡುಗಿಯನ್ನು ಆತನ ಐಶ್ವರ್ಯಕ್ಕೆ ಮೋಹಗೊಂಡು ಆತನಿಗೆ ತ್ಯಾಗಹಾಕಿದರು. ಆಕೆ ಚೆನ್ನಾಗಿದ್ದಾಳೆಯೇ?

# "ವಿಸಿಟಿಂಗ್ ಕಾರ್ಡ್"



ಮೊನ್ನೆ ಮಧ್ಯಾಹ್ನ ನಮ್ಮ ಕಛೇರಿಯಲ್ಲಿ ವಿಮಾನಧಾಳಿ ಮುಂಜಾಗ್ರತ ಕ್ರಮ. ಹಾಗೆ ಹೇಳಿದರೆ ಎಷ್ಟೋ ಕನ್ನಡಿಗರಿಗೆ ಅರ್ಥವೇ ಆಗುವುದಿಲ್ಲ. ಅಂತಹವರ ಅನುಕೂಲಕ್ಕಾಗಿ ಎ. ಆರ್. ಪಿ ಅಭ್ಯಾಸ ಎಂದು ಸುಲಭವಾಗಿ ಹೇಳುತ್ತೇನೆ. ನಮ್ಮ ಕಛೇರಿಯಲ್ಲಿ ನಾನು ಇಂದ-ಗೆ ಗುಮಾಸ್ತೆ. ಹಾಗಾಗಿ ಮಿಕ್ಕ ಗುಮಾಸ್ತೆಗಳ ಅಡಿಗುಮಾಸ್ತೆನಾನು. ಎ. ಆರ್. ಪಿ. ಶುರುವಾದಾಗ ಅಲ್ಲಿನ ವಾರ್ಡನನ್ನಾಗಿ ನಮ್ಮ ಅಧಿಕಾರಗಳನ್ನು ಚುನಾಯಿಸಿದ್ದು ಅಷ್ಟೇನೂ ಆಶ್ಚರ್ಯಕರವಲ್ಲ. ವಾರ್ಡನ್ನೆಂದರೆ ಮಿಕ್ಕವರ ಮನೆಬಾಗಿಲುಗಳಿಗೆ ಹೋಗಿ ಮನೆಯವರ ಕುಲಗೋತ್ರ ಆಸ್ತಿಪಾಸ್ತಿ ಮಕ್ಕಳು ಮರಿ, ಹೆಂಡತಿಗಿಂಡತಿ ಇವುಗಳನ್ನೆಲ್ಲಾ ಬರೆದು ಪಟ್ಟಿತಯಾರಿಸಿಟ್ಟು ಕೊಳ್ಳುವುದು. ಈ ಚಾಕರಿ ಅಧಿಕಾರಗಳೇಕೆ ಮಾಡಬೇಕು ? ನನ್ನಂತಹ ಗುಮಾಸ್ತೋ ಗುಮಾಸ್ತನಿರುವಾಗ-ಸರಿ-ವಾರ್ಡನ್ನರು ನಮ್ಮ ಅಧಿಕಾರಿಗಳು. ಅವರ ಕೆಲಸವೆಲ್ಲಾ ನನ್ನದು. ಹೀಗಾಗಿ ಅಭ್ಯಾಸ ಕ್ರಮಗಳು ಯಶಸ್ವಿಯಾಗಿ ನಡೆಯುತ್ತಿದ್ದುವು, ಮೊನ್ನಿನ ಮಧ್ಯಾಹ್ನವೂ ಅಭ್ಯಾಸವು ಯಶಸ್ವಿಯಾಗಿ ನಡೆಯಿತು. ಆದರೆ ನನಗೆ ಇಂದ—ಗೆ ಕೆಲಸದೊಂದಿಗೆ ಈ ಕೆಲಸವೂ ಕಟ್ಟಿಬಿದ್ದು ಬಹಳವಾಗಿ ಆಯಾಸವಾಗಿತ್ತು. ಮನೆಗೆ ಹೋದರೆ ಸಾಕಲ್ಲಪ್ಪಾ ಎನ್ನಿಸಿತ್ತು. ಇನ್ನೂ ನಾಲ್ಕೇಗಂಟೆ, ಒಂದು ಗಂಟೆ ಕಾಯಬೇಕಾಗಿತ್ತು ನಮ್ಮ ಅಧಿಕಾರಿಗಳು ಮನಗೆ ಹೋಗುವುದಕ್ಕೆ ಆ ಮೇಲೆ ಅರ್ಧಗಂಟೆ ಕಾಯಬೇಕು. ನಮ್ಮ ಹಿರಿಗುಮಾಸ್ತರು ಚಪ್ಪಲಿತೊಡುವುದಕ್ಕೆ. ನಂತರ ನಾನು ಹೊರಡಬೇಕಾಗಿತ್ತು. ಆದರೆ ಅಂದು ಎಲ್ಲರೂ ಐದುಗಂಟೆಗೇ ಹೊರಟರು ಹೊರಗೆ ಮೋಡಕವಿಯುತ್ತಿತ್ತು. ಹಾದಿಯಲ್ಲಿ ಮಳೆಗೆ ಸಿಕ್ಕಿದರೆ ಕಷ್ಟವೆಂದು ಎಲ್ಲರೂ ಬೇಗ ಹೊರಟಿದ್ದರು. ನಾನೂ ಅವರು ಹೊರಟಮೇಲೆ ನನ್ನ ಬೈಸಿಕಲ್ಲನ್ನು ತೆಗೆದುಕೊಂಡು ಹೊರಟೆ.

ಇನ್ನೇನು ಬೈಸಿಕಲ್ಲು ಹತ್ತಬೇಕು. ಹಿಂದಿನ ಚಕ್ರದ ಮಧ್ಯದಲ್ಲಿನ ಮೆಟ್ಟಿಂಗಾಲಿನ ಮೇಲೆ ಕಾಲಿಟ್ಟು, ಏದುತ್ತಾ ಏದುತ್ತಾ ಒಂದು ಎರಡು ಮೂರು ಎಂದು ಛಂಗಿ ಛಂಗಿ ಬೈಸಿಕಲ್ಲನ್ನು ಹತ್ತುವ ರೂಢಿ ನನ್ನದು, ಒಂದು ಎರಡು ಛಂಗಿದ್ದೆ. ಮೂರು ಎಂದು ಸೈಕಲಾಸನದಮೇಲೆ ಹಾರಬೇಕು. ಅಷ್ಟರಲ್ಲೆ ರಾಮುವು ಹತ್ತರದಲ್ಲೇ ಕೂಗಿದಂತಾಯಿತು. ಮೆಟ್ಟಿಂಗಾಲಿನಿಂದಿಳದು ಕಚ್ಚೆಸರಿಮಾಡಿಕೊಂಡು ಹಾದಿನೋಡಿದೆ.ರಾಮುವೇ ಸಾಕ್ಷಾತ್ತು ಹಾಜರಿದ್ದ. ಏನಯ್ಯಾರಾಮುಏನು ಸಮಾಚಾರ ಎಂದೆ. "ಏನೂ ಇಲ್ಲ ನಿನಗೆ

ಒಂದು ವಿಸಿಟಿಂಗ್ ಕಾರ್ಡು ತೋರಿಸೋಣ ಎಂದು ಕೂಗಿದೆ" ಎಂದ. ವಿಸಿಟಿಂಗ್ ಕಾರ್ಡು ಅಚ್ಚು ಹಾಕಿಸಲೂ ನಮಗೆ ಯೋಗಬರುವಂತಿಲ್ಲ. ನಮಗೇಕೆ ಈ ಕಾರ್ಡಿನ ದುಃಖ? ಎಂದೆ. "ಇಲ್ಲ ನೋಡು ಇದು ಬಹಳ ಅಂದವಾಗಿದೆ. ಎಂದು ತನ್ನ ಜೇಬಿನೊಳಗಿನಿಂದ ತೆಗೆದು ಒಂದು ಕಾರ್ಡನ್ನು ಕೊಟ್ಟ. ತನ್ನ ಆಫೀಸರ ಹತ್ತಿರ ಬಂದವರಾರೋ ಆ ಕಾರ್ಡನ್ನು ಕೊಟ್ಟರೆಂದೂ ತಾನು ಅದನ್ನು ತಂದನೆಂದೂ ವಿಶದೀಕರಿಸಿದ. ಆ ಕಾರ್ಡಾದರೊ ಎಲ್ಲ ಕಾರ್ಡುಗಳಂತಲ್ಲ. ನುಣುಪು ನಯ ಜಂತದಂತಿತ್ತು. ಅದರಮೇಲಿದ್ದ ಅಕ್ಷರಗಳೆಲ್ಲವೂ ಎದ್ದು ನಿಂತಂತೆ ಅಚ್ಚಾಗಿದ್ದವು. ಮಹರಾಯನ ಹೆಸರಿಗೆ ಬಿ.ಎ. ಎಂ.ಎ ಇತ್ಯಾದಿ ಬಿರುದುಗಳೊಂದೂ ಇಯೂವ ಕೆಲಸ ಏನು ಎತ್ತ ಯಾವುವೂ ಲ್ಲ ಇಲ್ಲ. ಬರೀ ಶ್ರೀಯುತ ಶರಭಾಯಿ. ಹಿಂದೂದೇಶ, ಎಂದಿತ್ತು. ಯಾರೋ ಇದು ಶರಭಾಯಿ ಬಾಯಿ ತುಂಬ ಬಾಣ ತುಂಬಿಕೊಂಡಿದ್ದನೇ ನಿಮ್ಮಗಳ ಮೇಲೆ ಬಿಡುವುದಕ್ಕೆ. ಏನು ಚಾಡಿ ಹೇಳುಕ್ಕೆ ಬಂದಿದ್ದ, ಎಂದು ಕೇಳಿದೆ. - "ಇಲ್ಲ ಕಾಣೊ ಯಾರ ಮೇಲೂ ಚಾಡಿ ಹೇಳುಕ್ಕೆ ಬರಲಿಲ್ಲ. ಅನಾಥಾಲಯಕ್ಕೆ ಹೋಗಿದ್ದನಂತೆ ಅದರ ಕಾರ್ಯಕ್ರಮಗಳನ್ನು ಮೆಚ್ಚಿ ಹತ್ತೋ ಸಾವಿರವೋ ಲಕ್ಷವೋ ಹಣ ಕೊಡಲು ಬಂದಿದ್ದನಂತೆ." ಎಂದು ಹೇಳಿದ. ಆ ವೇಳೆಗೆ ತುಂತುರು ಹನಿ ಹಾಕಿತು, ನಾನು ಬೈಸಿಕಲ್ಲನ್ನು ಯಥಾಪ್ರಕಾರ ಒಂದು ಎರಡು ಮೂರು ಸೈಎನ್ನುತ್ತಾ ಹತ್ತಿ ಹೊರಟೆ. ಅವನು ನಡೆದು ಬರುತ್ತಿದ್ದನಾದ್ದರಿಂದ, ಅವನ ಮಾರ್ಗ ಅವನೇ ಹಿಡಿದ.

ಪೌರಸಭಾ ಕಛೇರಿಗೆ ಬರುವ ಹೊತ್ತಿಗೆ ಮಳೆಯು ನಿಂತಿತು. ರಸ್ತೆಯಲ್ಲೇ ಕಾಕೀ ಧಾರಿಗಳು ಇಬ್ಬರು, ಜಯ ವಿಜಯರಂತೆ ನಿಂತಿದ್ದರು. ನಾನು ಆ ಕಡೆ ಸುಳಿದಕೂಡಲೇ 'ರೀ,ರೀ,ಇಳೀರ್ರೀ' ಎಂದು ಕೂಗಿದರು. ಇದೇನಿದು ಹಾಡು ಶುರುಮಾಡಿದಹಾಗೆ ನೀ ಸಮಾನಮೆವರು ರಾಮು ನೀ ಸಮಾನಮೆವರು ಎಂವಂತೆ ರೀ, ರೀ, ಇಳೀರ್ರೀ ಎಂತ ಪಲ್ಲವಿ ಆರಂಭಿಸಿದರು ಎಂದು ಯೋಚಿಸುತ್ತಾ ಇಳಿದೆ. ಹತ್ತಿರ ಬಂದರು ಹಾದಿಪಾಲಕರು. ಲೈಸೆನ್ಸ್ ಎಲ್ಲೀ ಎಂದು ಕೇದರು. ನಾನೂ ಬೈಸಿಕಲ್ಲನ್ನು ಹುಡುಕಿದೆ. ಕಾಣಿಸಲಿಲ್ಲ. ಅವರನ್ನು ನೋಡಿದೆ ಆವರೂ ಬೈಸಿಕಲ್ಲನ್ನು ನೋಡಿದರು. ಅವರಿಗೂ ಕಾಣಿಸಲಿಲ್ಲ. 'ಎಲ್ಲೀ?' ತಿರುಗಿ ಸವಾಲು. ಆಗ ಜ್ಞಾಪಕಬಂತು ನನಗೆ, ಹೋದವರುಷ ನಾನು ಕೊಂಡಿದ್ದು ಲೈಸನ್ಸನ್ನು ಈ ವರ್ಷ ಆ ಕಾರಣದಿಂದಲೇ ದೊಡ್ಡರಸ್ತೆ ರೂಢಿಯಾಗಿ ತಪ್ಪಿಸಿಕೊಂಡು ತಿರುಗುತ್ತಿದ್ದುದು. ಮಳೆಯ ಹೆದರಿಕೆಗೆ ಹತ್ತಿರದ ರಸ್ತೆ ಹಿಡಿದೆ ಈ ಖಾಕಿ ಧಾರಿಗಳ ಕೈಲಿಸಿಕ್ಕಿ ಬಿದ್ದುದು. ಇವರುಗಳ ಹತ್ತಿರ ಹೀಗೆ ಹೇಳುವುದಕ್ಕಾಗುತ್ತದೆಯೇ?

ಅವರನ್ನು ಒಂದು ಬಾರಿ ತಿರುಗಿ ನೋಡಿದೆ. ಸೈಕಲನ್ನು ನೋಡಿದೆ. ಜೇಬಿಗೆ ಕೈಹಾಕಿದೆ, ಕಾಗದದ ಚೂರು ತೆಗೆದು

ಕೊಂಡು ನನ್ನ ವಿಳಾಸವನ್ನು ಬರೆದು ಕೊಡಲು, ಆ ವೇಳೆಗೆ ಜೇಬಿನಲ್ಲಿಕಾರ್ಡ್ ಸಿಕ್ಕಿತು. "ಶ್ರೀ ಶರಭಾಯಿ ಹಿಂದೂಸ್ಥಾನ" ಸ್ವಲ್ಪ ಕೀವಿಯಿಂದ ಹೇಳಿದೆ ಲೈಸೆನ್ಸ್ ಇಲ್ಲದಿರುವುದು ದಿಟ. ಅಜಾಗರೂಕತೆಯ ಫಲ ಅದು. ಇದೇ ನನ್ನ ವಿಸಿಟಿಂಗ್ ಕಾರ್ಡ್. ನಾಳೆ ಕೋರ್ಟಿನಲ್ಲಿ ಹಾಜರಾಗಿ ದಂಡ ತೆರುತ್ತೇನೆ ಎಂದು ಆ ಕಾರ್ಡನ್ನು ಅವರ ಕೈಯಲ್ಲಿ ಕೊಟ್ಟೆ. ವಿಸಿಟಿಂಗ್ ಕಾರ್ಡ್ ಇಟ್ಟುಕೊಂಡವನು ಇಷ್ಟು ಅಂದ ಚೆಂದದ ಕಾರ್ಡಿಟ್ಟು ಕೊಂಡಿರುವವನು ದೊಡ್ಡ ಮನುಷ್ಯನೇ ಇರಬೇಕೆಂದು ಅವರೂ ಸ್ವಲ್ಪ ಮರ್ಯಾದೆಯಿಂದ ಮಾತನಾಡಿ 'ಆಗಬಹುದು ಸಾರ್' ಎಂದರು. ಹಿಂತಿರುಗಿ ನೋಡದೇ ವೇಗ ವೇಗವಾಗಿ ಮನೆಬಂದು ಸೇರಿಕೊಂಡೆ.

ಬಡವರಿಗ್ಯಾಕೆ ವಿಸಿಟಿಂಗ್ ಕಾರ್ಡ್ ಎಂದು ಮೊದಲೇ ಹಳಿಯುತ್ತಿದ್ದ ನನಗೆ ಈಗ ಅದರ ಪ್ರಯೋಜನ ಗೊತ್ತಾಯಿತು! ಬಡವರಿಗೆ ಬೇಕೇ ಬೇಕು. ಆದರೆ ಅವರು ಅಚ್ಚುಹಾಕಿಸಬೇಕಿಲ್ಲ. ಕಂಡವರದು, ದೊಡ್ಡವರದು ಎರಡು ಮೂರು ಕಾರ್ಡುಗಳನ್ನಾದರೂ ಕಿಸೆಯಲ್ಲಿ ಇಟ್ಟೇಇರಬೇಕು.

ನಾನಂತೂ ಅಂದಿನಿಂದ ಅವರಿವರ ಕಾರ್ಡನ್ನು ಇಟ್ಟೇ ಇರುತ್ತೇನೆ.

---

# ಗಾದೆಗಳು

ಅತಿಮೀಸೆ ಮೂತಿ ಕೆಡಿಸಿತು.

* * *

ನಾರುಮಡಿ ಉಟ್ಟರೂ ಹಾರ್ಮೋನಿಯಂ ಮುಟ್ಟಬೇಡ.

* * *

ಕಾಪಿ ಮಾಡುವುದಕ್ಕೆ ಬರದವನು ಕ್ವೆಶ್ಚನ್ ಪೇಪರ್ ದೂರಿದ.

* * *

ಬಾಯಲ್ಲಿ ಬಡಾಯಿ ; ಕೈಯಲ್ಲಿ ಕಮೀಷನ್

* * *

ಜೀವಹಿಂಡಿ ಜೀವವಿಮೆ ಮಾಡಿಸು.

* * *

ಹಾಡಿದವನ ಉಗುಳು, ಬಾರಿಸಿದವನ ಮೈಮೇಲೆ.

* * *

ಇಲಿ ಆಸೆ ಹುಲಿಕೆಡಿಸಿತು ; ಕಾಡಿಂದ ಬೀದಿಗೆಳೆಯಿತು.

* * *

ಬೆರಳು ತೋರಿಸಿದರೆ ಉಂಗುರ ಹಾಕಿಬಿಡುತ್ತಾರೆ.

—ನಾ ಕೆ.

# ಎಮ್ಮೆ ವ್ಯಾಪಾರ

( ನನ್ನ ಮಾನ್ಯ ಮಿತ್ರರೊಬ್ಬರು ಹೇಳಿದ ಕಥೆ )

ಹಾಸನದ ಜಾತ್ರೆ ಎಂದರೆ ಮುನಸೀಫ್ ಸುಬ್ಬಅಯ್ಯರ್ರವರ ಕಥೆ ನೆನಪಿಗೆ ಬರುತ್ತೆ. ಆಗ ಅವರು ಹಾಸನದಲ್ಲಿ ಮುನಸೀಫರಾಗಿದ್ದರು. ದನದ ಜಾತ್ರೆ ಷುರುವಾದಾಗ, ಒಂದು ಎಮ್ಮೆಯನ್ನು ತೆಗೆದುಕೊಳ್ಳಬೇಕೆನ್ನಿಸಿತು, ಅವರಿಗೆ—ಕಾಫೀಗೆ ಒಳ್ಳೇ ಹಾಲು ಆಗುತ್ತೆ ಅಂತ. ಸರಿ, ಜವಾನನ್ನು ದವಾಲಿ ಸಹಿತ ಹಿಂದೆ ಕರೆದುಕೊಂಡು ಸ್ವಯಂ ವ್ಯಾಪಾರಕ್ಕೆ ಹೊರಟರು—ತಾವೇ ಖುದ್ದು ವ್ಯಾಪಾರಕ್ಕೆ ನಿಂತರೆ ತಾವು ಮುನಸೀಫರೆಂಬ ದಾಕ್ಷಿಣ್ಯದ ಮೇಲೆ ಒಳ್ಳೇ ಎಮ್ಮೆಯನ್ನು ಕಡಿಮೆ ಖರೀದಿಗೆ ಕೊಡುತ್ತಾರೆ ಜನ ಅಂತ ಅವರ ಅಭಿಪ್ರಾಯ. ಅಲ್ಲಲ್ಲಿ ಹುಡುಕಿದನಂತರ, ಕಡೆಗೆ, ದಪ್ಪಕ್ಕೆ, ಗಿಡ್ಡಕ್ಕೆ, ಕಪ್ಪಗೆ ಮಿಂಚುತ್ತಿದ್ದ ಜಾನುವಾರೊಂದನ್ನು ಚುನಾಯಿಸಿ, ಅದರ ಮಾಲೀಕನಿಗೆ "ಇದರ ಖರೀದಿ ಎಷ್ಟಯ್ಯಾ" ಎಂದು ಕೇಳಿದರು. ಅವರ ಮಾಲೀಕ, ಒಬ್ಬ ಹಳ್ಳಿಯವನು, "ನಿಮಗ್ಯಾಕೆ, ಸ್ವಾಮಿ, ಇದು" ಎಂದು ಕೇಳಿದ,—ಖರೀದಿ ಹೇಳುವುದರ ಬದಲು.

"ತಲೆಹರಟೆ ಹೊಡಿಬೇಡಯ್ಯ. ಕೇಳಿದ ಪ್ರಶ್ನೆಗೆ ಉತ್ತರ ಕೊಡು. ಹೆಚ್ಚಿಗೆ ವಿಷಯ ನಿನಗ್ಯಾಕಯ್ಯ. ಖರೀದಿ ಎಷ್ಟು ಹೇಳು," ಎಂದು ಮುನಸೀಫರು, ಕೋರ್ಟಿನಲ್ಲಿ ಸಾಕ್ಷಿಗೆ ಹೇಳುವ ಅಭ್ಯಾಸ ಬಲದಮೇಲೆ ಹೇಳಿದರು.

ಆತ ಎಪ್ಪತ್ತೈದು ರೂಪಾಯಿ ಹೇಳಿದ. ಷುರು ಆಯ್ತು ಚೌಕಾಸಿ ವ್ಯಾಪಾರ. ಮುನಸೀಫರು ನಲವತ್ತರಿಂದ ಪ್ರಾರಂಭಿಸಿದರು. ಆತ ಅರವತ್ತೈದಕ್ಕೆ ಇಳಿದು, ಎಲಡಕೆಯನ್ನು ಜಗೆಯುವುದರಲ್ಲೇ ಮಗ್ನನಾಗಿ "ನಿಮಗ್ಯಾಕೆಬೇಕು ಸ್ವಾಮಿ, ಇದು" ಎಂದ.

ಮುನಸೀಫರಿಗೆ ತಾಳ್ಮೆಗೆಟ್ಟಿತು. ಎದುರು ಪ್ರಶ್ನೆಯನ್ನು ಹಾಕುವ ಸಾಕ್ಷಿಯನ್ನು ಕಂಡರೆ ಅವರಿಗೆ ಮೈ ಉರಿಯುತ್ತಿತ್ತು. ಆಗ ಹಾಗೆ ಆಯ್ತು ಅವರಿಗೆ. "ತಲೆ ತಿರುಗುತ್ತೇನೋ ನಿನಗೆ. ಅಧಿಕಪ್ರಸಂಗಿ, ಖರೀದಿ ಮಾತನಾಡುತಿದ್ರೆ ಏಕೆಬೇಕು ಅಂತಾನೆ. ನಿನಗ್ಯಾಕಯ್ಯಾ ಅವೆಲ್ಲಾ, ಬಾಯಿ ಮುಚ್ಕೊಂಡು ಖರೀದಿ ಮಾತನಾಡು."—ರೇಗಿದ್ದರು; ಬೆದರಿಸಿದರು.

ಆತ, ಪಾಪ! ನಮ್ರನಾಗಿ ವ್ಯಾಪಾರದ ಮಾತನ್ನು ಮುಂದುವರಿಸಿದನು. ಕಡೆಗೆ ಐವತ್ತೈದು ರೂಪಾಯಿಗಳಿಗೆ ವ್ಯಾಪಾರ ನಿಷ್ಕರ್ಷೆಯಾಯ್ತು. ಮುನಸೀಫರು

ತಮ್ಮ ಆಳಿಗೆ, "ಇದನ್ನು ಮನೆಗೆ ಹೊಡೆದುಕೊಂಡು ಹೋಗಯ್ಯ" ಎಂದು ಹೇಳಿ ಕಳುಹಿಸಿ, ಹಣವನ್ನು ತೆಗೆದು ಎಣಿಸಲಾರಂಭಿಸಿದರು. ಆ ಮಾಲೀಕ, ಹಳ್ಳೀ ಬುದ್ಧಿ! ಮತ್ತೊಮ್ಮೆ "ಸ್ವಾಮಿಯವರು ಸಿಟ್ಟುಮಾಡಿಕೊಳ್ಳಬಾರದು; ತಮಗ್ಯಾಕೆ ಬೇಕು ಇದು" ಎಂದು ಕೈಮುಗಿದು ಕೇಳಿದನು.

ಆ ನಮಸ್ಕಾರ ಮುನಸೀಫರ ಹೆಮ್ಮೆಯನ್ನು ಮುಟ್ಟಿರಬೇಕು. ಅಂತಲೇ ಅವರು, ಹಣವನ್ನು ಆತನ ಕೈಗೆ ಕೊಡುತ್ತಾ "ತಗೊಳ್ಳಯ್ಯ, ರೂಪಾಯಿಗಳನ್ನ ....ಯ್ಯಾಕೆ ಬೇಕಂತೆ ಯಾಕೆ!...ಮತ್ಯಾಕಯ್ಯ ಎಮ್ಮೆ ತಗೊಳ್ಳೋದು—ಹಾಲು ಹೈನಕ್ಕಲ್ದೆ" ಎಂದು ಹೋಗುವುದರಲ್ಲಿದರು. ಆಗ, ಆ ಮಾತು ಕೇಳಿ, ಆ ಮಾಲೀಕ, ಹಣವನ್ನು ಜೇಬಿನೊಳಕ್ಕೆ ತುರುಕಿಕೊಂಡು, ಹಲ್ಕಿರಿದು "ಸ್ವಾಮಿ ಅದು ಎಮ್ಮೆ ಅಲ್ಲ—ಕೋಣ!" ಎಂದು ಹೇಳಿ, ಆ ಜನಗಳ ಗುಂಪಿನೊಳಹೊಕ್ಕು — ಪರಾರಿ!

—**ರಾಮು.**




ಬೆಂಗಳೂರಿನ ಬ್ಲಾಕ್ ಔಟ್‌ನಲ್ಲಿ.

# ಅನುರಾಗಾಗ್ನಿ

ಶಾಮಿ ತನ್ನ ಮುಖ ಸೂರ್ಯನ ಹಾಗೆ ಪ್ರಜ್ವಲಿಸಲಿ ಅನ್ನುವಂತೆ ನಗೆಯನ್ನು ಬೀರುತ್ತಾ, ತನ್ನ ಜತೆಯಲ್ಲಿ ೧೬-೧೭ ವರ್ಷದ ಹುಡುಗನೊಬ್ಬನನ್ನು ಕರೆದುಕೊಂಡು ನನ್ನ ರೂಮಿಗೆ ನುಗ್ಗಿದ. "ಏನಯ್ಯ, ಇಷ್ಟು ಅಪರೂಪ?" ಎಂದು ಹೇಳಿ, "ಇನ್ನೂ ಅಪರೂಪವಾಗಿರಬಾರದೆ!" ಅಂತ ಅಂದುಕೊಂಡೆ. ಇಬ್ಬರಿಗೂ ಮಾತಿನ ಮೇಲೆ ಮಾತು ಬೆಳೆದು ಶಾಮಿ ಅಂದ:-

"ಒಂದು ಸಂತೋಷದ ಸುದ್ದಿ ಏನು ಅಂದರೆ, ನಮ್ಮ ತರುಣರು ಸಾಹಿತ್ಯದಲ್ಲಿ ಹೆಚ್ಚುಹೆಚ್ಚಾಗಿ ಆಸಕ್ತಿ ತೋರುತ್ತಿದ್ದಾರೆ. ಬೆಳಗಾಗಿ ಎದ್ದರೆ ಮಾರ್ಕೆಟ್ಟಿಗೆ ತರಕಾರಿ ಬಂದು ಸುರಿಯುವ ಹಾಗೆ ಪುಸ್ತಕಗಳು ಅಚ್ಚಾಗುತ್ತಿವೆ. ನೋಡು, ಸುಬ್ರಾಮು, ಇವರಿಗೆ ಸಹಾನುಭೂತಿ ತೋರಿಸಬೇಕು; ಎನ್ಕರೇಜ್‌ಮೆಂಟ್ ಕೊಡಬೇಕು. ಇವತ್ತಿನ ಬೀಜ ನಾಳೆ ಬೆಳೆ; ಅಲ್ಲವೆ? ಇಲ್ಲಿ ನೋಡು. ಇವನು—ನನ್ನ ತಂಗಿಮಗ ಕಿಟ್ಟು, ಇಂಟರ್ ಕಾಲೇಜಲ್ಲಿದ್ದಾನೆ—ಒಂದು ನಾಟಕ ತಂದುಕೊಟ್ಟ. ಇವನೇ ಬರೆದದ್ದು. ನಿನಗೆ ತೋರಿಸೋಣ ಅಂತ ತಂದಿದ್ದೀನಿ. ಹಾಗೆ ಓದು, ನೋಡು. ಗಟ್ಟಿಯಾಗಿ ಓದು."

(ಆ ನಾಟಕ ಈ ಕೆಳಗೆ ಕಂಡ ಹಾಗೆ ಇತ್ತು.)

## ಅನುರಾಗಾಗ್ನಿ

(ಸಂಜೆ. ಸೂರ್ಯ ಮುಳುಗಿದ್ದಾನೆ. ಪೂರ್ವದಿಕ್ಕಿನಲ್ಲಿ ಚಂದ್ರನು ಸುಮಾರು ೩೦ ಡಿಗ್ರಿ ಎತ್ತರದಲ್ಲಿದ್ದಾನೆ. ಮಂದಮಾರುತನು ನಿಟ್ಟುಸಿರು ಬಿಡುತ್ತ ಲಾಲ್‌ಬಾಗಿನ ವೃಕ್ಷಸಮೂಹದಲ್ಲಿ ಸುಳಿದಾಡುತ್ತಿದ್ದಾನೆ. ಅರಳಿರುವ ಹೂಗಳ ಕಂಪು ಗಾಳಿಯಲ್ಲಿ ತೇಲಿ ಬರುತ್ತಿದೆ. ರಸಿಕಜನರ ಗುಂಪುಗಳು ಅಲ್ಲಲ್ಲಿ ಚೆದರಿವೆ. ನಾಗೇಂದ್ರ ನಾಗಿನಿಯರು ಒಂದು ಲತಾಗೃಹದ ಶಿಲಾಸನದ ಮೇಲೆ ಕುಳಿತಿದ್ದಾರೆ. ನಾಗೇಂದ್ರನಿಗೆ ೨೦ ವರ್ಷದ ವಯಸ್ಸು; ನಾಗಿನಿಗೆ ಸುಮಾರು ೧೬ ವರ್ಷವಿರಬಹುದು. ಇಬ್ಬರೂ ಆಧುನಿಕ ರೀತಿಯಲ್ಲಿ ವಸ್ತ್ರಧಾರಣಮಾಡಿದ್ದಾರೆ. ಅವರು ತಮ್ಮ ಪರಸ್ಪರ ಪ್ರೇಮದಲ್ಲಿ ತಲ್ಲೀನರಾಗಿರುವುದರಿಂದ ಅವರಿಗೆ ಬಾಹ್ಯ ಪ್ರಪಂಚವೆ ಇಲ್ಲದಂತಾಗಿದೆ. ಪ್ರೇಮ ಅವರನ್ನು ಬಂಧಿಸಿ ಮೂಕರನ್ನಾಗಿಮಾಡಿದೆ. ಸದ್ದೆಲ್ಲ ಅಡಗಿದೆ. ಈ ನೀರವತೆ ಅವರಿಗೆ ಅಮೃತಪ್ರಾಯವಾಗಿರುವಂತೆ ತೋರುತ್ತದೆ. ಮಾತನಾಡಿದರೆ ಎಲ್ಲಿ ವೀಣೆಯ ತಂತಿ ಹರಿದು ಲಾರಿಯ ಹಾರನ್ ಅಂತೆ ಆಗುವುದೊ ಎಂದು ಅವರು ಭಯಪಡುವ ಹಾಗಿದೆ. ಅನುರಾಗದ ದೆಸೆಯಿಂದ ಇಬ್ಬರೂ ಅರ್ಧ ನಿಮೀಲಿತ ನಯನರಾಗಿದ್ದಾರೆ. ಈ ದೃಶ್ಯದ ಉದ್ದಕ್ಕೂ ಮೃದು ಮಧುರ ವೀಣಾನಿನಾದ ಕೇಳುತ್ತದೆ.

**ಕೆಲಹೊತ್ತಾದಮೇಲೆ ನಾಗೇಂದ್ರನು ನಿಟ್ಟುಸಿರು ಬಿಡುತ್ತ:-)**

[ನಡುವೆ ಶಾಮಿ:- "ಸಾಯಂಕಾಲೆ ವನಾಂತೆ ಕುಸುಮಿತಸಮಯೆ." ಆ, ಹೇಗಿದೆ ?

ನಾಗೇಂದ್ರ;- ಪ್ರಿಯೆ !

ನಾಗಿನಿ:- ಪ್ರಿಯ !

[ಕಿಟ್ಟು:- ಪ್ರಿಯೆ, ಪ್ರಿಯ ಅನ್ನುವುದರ ಬದಲು, ನಾಗೇಂದ್ರ, "O, my love!" ಅಂತಲೂ, ನಾಗಿನಿ, "yes, my love!" ಅಂತಲೂ ಅಂದರೆ ಉತ್ತಮ. ಆದರೆ ಅದು ಪರಭಾಷೆ ಆಗುತ್ತೆ ಅಂದು ಬಿಟ್ಟುಬಿಟ್ಟೆ."]

ನಾಗೇಂದ್ರ:- ನಾಗಿನಿ, ಈ ಭೂಮಿಯು ಇರುವವರೆಗೂ ಈ ಲತಾವೃಕ್ಷಾದಿಗಳು ಬದುಕಿರುವವರೆಗೂ, ಈ ವಾಯುದೇವನು ಸಂಚರಿಸುತಿರುವವರೆಗೂ, ಈ ಸೂರ್ಯ ಚಂದ್ರ ತಾರಾಗಣಗಳು ಇರುವವರೆಗೂ, ನನ್ನ ಉಸಿರಿರುವವರೆಗೂ, ನಾನು ನಿನ್ನನ್ನುಳಿದು ಇತರರನ್ನು ಪ್ರೀತಿಸಲಾರೆ. ಶಂಕೆಯಿಂದ ನನ್ನೆದೆ ಒಡೆಯುವಂತಿದೆ. ಹೇಳು; ನನ್ನನ್ನು ಪ್ರೀತಿಸಲಾರೆಯಾ, ವರಿಸಲಾರೆಯ ?

ನಾಗಿನಿ:- ನಾಗೇಂದ್ರ, ನನ್ನ ಅಭಿಲಾಷೆ ನಿನಗಾಗಲೆ ತಿಳಿದೆ ಇದೆ. , ಡೆಸ್ಡಿಮೋನಳಂತೆ, ನನ್ನ ಮನಸ್ಸು ನಿನ್ನಲ್ಲಿದೆ. ಅನುಮಾನವೇಕೆ ?

ನಾಗೇಂದ್ರ:- (ಹಾಡು)

ನಾನೆ ಧನ್ಯನು, ಅಹಾ ! ನಾನೆ ಧನ್ಯನು।
ನಾಗಿನಿಯಂತಹ ನೀರೆಯ ಒಲವನು ಪಡೆದಿಹ
ನಾನೆ ಧನ್ಯನು, ಆಹಾ ! ನಾನೆ ಧನ್ಯನು॥
ಯಾರಿದ್ದೇನು, ಹಣವಿದ್ದೇನು,
ನಾಗಿನಿಯುಳಿದು ಏನಿದ್ದೇನು.
ನಾಗಿನಿಯೊಲವೇ ಇಹವೂ ಪರವೂ
ಸರ್ವವು ಆಹುದು. ಆಹಾ ! ನಾನೆ ಧನ್ಯನು॥

[ಕಿಟ್ಟು:- ಯಾವ ರಾಗಕ್ಕೆ ಇದನ್ನು ಹೊಂದಿಸಿಕೊಳ್ಳಬೇಕು ಅಂತ ನನಗೆ ಗೊತ್ತಿಲ್ಲ. ಇನ್ನು ಯಾರನ್ನೂ ಕೇಳಿಲ್ಲ. ಅಷ್ಟಕ್ಕೆ ಆಕ್ಟರ್ಸ್ ಸಮಯ ನೋಡಿ ಯಾವುದು ತೋರತ್ತೊ ಅ ರಾಗದಲ್ಲಿ ಹಾಡಬಹುದು.]

(ಒಂದು ವಾರದ ತರುವಾಯ. ಲಾಲ್‌ಬಾಗ್. ಸೆಕೆ ವಿಪರೀತವಾಗಿದೆ. ಗಾಳಿ ಸ್ವಲ್ಪವೂ ಇಲ್ಲ. ಅದೇ ಲತಾಗೃಹಕ್ಕೆ ನಾಗೇಂದ್ರ ನಾಗಿನಿಯರು ಬೇರೆಬೇರೆ ಕಡೆಗಳಿಂದ ಬರುತ್ತಿರುತ್ತಾರೆ. ನಾಗೇಂದ್ರ ಖಿನ್ನನಾಗಿದ್ದಾನೆ.)

ನಾನು:- "ಸೆಕೆ ವಿಪರೀತ. ಗಾಳಿ ಇಲ್ಲವೆ ಇಲ್ಲ." ಇದೆಲ್ಲ ಏಕಯ್ಯ ?

ಕಿಟ್ಟು:- ಪ್ರಕೃತಿಯೂ ಸಹ ಅವರಿಗೆ ಸಹಾನುಭೂತಿ ತೋರುತ್ತದೆ. ಪ್ರೇಮ ಅಷ್ಟು ಮಹತ್ತರವಾದುದು.]

ನಾಗಿನಿ:- ಪ್ರಿಯ, ಇದೇನು ? ಟೀಪಾರ್ಟಿಯ ಬಟನ್ ಅಂತೆ ನಿನ್ನ ಮುಖವು ಬಾಡಿರುವುದಲ್ಲ.

[ಕಿಟ್ಟು:- ಉಪಮೆ ಎಷ್ಟು ನವೀನವಾಗಿದೆ ;

ನಾನು:- yes, quite a modern Simile!]

ನಾಗೇಂದ್ರ:- ಪ್ರಿಯೆ. ಏನು ಹೇಳಲಿ. ಎಲ್ಲ ನನ್ನ ಹಣೆಬರಹ. ನಿನ್ನನ್ನಗಲಿರ ಬೇಕಾಗಿ ಬಂದಿದೆ.

ನಾಗಿನಿ:- ಅಧೈರ್ಯಪಡಬೇಡ. ಸಮಾಧಾನ ಚಿತ್ತನಾಗು. ನೀನು ಎಲ್ಲಿ ಹೋದರೂ ನಾನು ನೆಳಲಿನಂತೆ ಬರುತ್ತೇನೆ. ಯಾರು ಏನೆಂದರೂ ನಿನಗೋಸ್ಕರ ಈ ಊರನ್ನಾದರೂ ಬಿಡುತ್ತೇನೆ.

ನಾಗೇಂದ್ರ:- ನಾಗಿನಿ, ನೀನು ಸ್ತ್ರೀರತ್ನ, ಕಂಡೆಯ. ಆದರೂ ಲೋಕಾಪ ವಾದ ವಿಷದಂತೆ ಸುಟ್ಟುಹಾಕುತ್ತದೆ. ಆದ್ದರಿಂದ ನೀನು ಇಲ್ಲೇ ಇರು. ನನ್ನ ಕೆಲಸ ಬಹುಕಾಲ ಹಿಡಿಯಲಾರದು. ದೇವ ದೇವನು ಬೇಗನೆ ನಮ್ಮ ಪುನಸ್ಸಮಾಗಮ ವನ್ನುಂಟುಮಾಡಲಿ.

ನಾಗಿನಿ:—ನಾಗೇಂದ್ರ, ನಾನೂ ನಿನ್ನ ಬರವನ್ನೆ ಹಾರೈಸುತ್ತೇನೆ.

ನಾಗೇಂದ್ರ:—ಪ್ರಿಯೆ, ನೀನು ಎಚ್ಚರಿಕೆಯಿಂದಿರು. ನಿನ್ನ ತಂದೆತಾಯಿಯರಿಗೆ ನಮ್ಮ ಮದುವೆ ಆಗದು. ಅವರು ನಮ್ಮ ಅನುರಾಗಕ್ಕೆ ಭಂಗ ತರಲು ಯತ್ನಿಸಿದರೆ ಅವರಿಗೆ ಸೋಲಬೇಡ.

ನಾಗಿನಿ:—ಪ್ರಿಯ, ಮನಸ್ಸಿನ ಆಲಯದಲ್ಲಿ ನಿನ್ನ ಯೋಚನೆಯ ಪ್ರತಿಮೆಯ ನ್ನಿಟ್ಟು ಸದಾ ಪೂಜಿಸುತ್ತಿರುತ್ತೇನೆ. ನೀನೂ ಸಹ ನನ್ನನ್ನು ಮರೆಯಕೂಡದು.

ನಾಗೇಂದ್ರ:—ಛೆ ! ಛೆ ! ನಾಗಿನಿ ; ಹಾಗೆಂದರೇನು. ಪ್ರಾಣ ಹೋದರೂ ಹಾಗೆ ಮಾಡಲಾರೆ. ನಾನೇದರೂ ಹಾಗೆ ಮಾಡಹೋದರೆ ನನ್ನ ತಲೆ ಸಿಡಿದು ಸಹಸ್ರ ಪಾಲಾಗಲಿ. ನಿನ್ನನ್ನು ಮರೆಯುವುದರ ಬದಲು ನಾನು ಸಾ—(ಅಷ್ಟರಲ್ಲಿ ನಾಗಿನಿ ತನ್ನ ಹಸ್ತದಿಂದ ಅವನ ಬಾಯಿ ಮುಚ್ಚುತ್ತಾಳೆ.)

[ಶಾಮಿ:—ನೋಡಿದೆಯ, ಅದು ಎಷ್ಟು ರಿಯಲಿಸ್ಟಿಕ್ ಆಗಿದೆ !]

(ನಾಗಿನಿಯ ಮನೆಯ ಮುಂದಿನ ರಸ್ತೆ. ರಾತ್ರಿ ಒಂಭತ್ತು ಗಂಟೆ ಸಮಯ. ರಸ್ತೆಯಲ್ಲಿ ನಾಗೋಲಿ ಮೆರವಣಿಗೆಗೆ ಸಿದ್ಧವಾಗಿರುವ ಬ್ಯಾಂಡಿನವರು, ದೀಪದವರು. ಮೋಟಾರು, ಮತ್ತು ಸೋಜಿಗವನ್ನು ನೋಡಲು ಬಂದಿರುವವರ ಸಣ್ಣಪುಟ್ಟ ಗುಂಪು ಗಳಿವೆ. ಸುತ್ತಲೂ ಇರುವ ಮನೆಗಳ ಜನರು ಗೇಟುಗಳಲ್ಲಿಯೂ, ಬಾಗಿಲುಗಳಲ್ಲಿಯೂ, ಕಿಟಕಿಗಳೊಳಗೂ, ಬಿಸಿಲು ಮಾಳಿಗೆಗಳಮೇಲೂ ನಿಂತಿದ್ದಾರೆ. ದೂರದಲ್ಲಿ ಫಿರಂಗಿ ಗಳ ಸದ್ದು ದೃಶ್ಯದ ಉದ್ದಕ್ಕೂ ಕೇಳಿಬರುತ್ತಿರುತ್ತದೆ. ನಾಗೇಂದ್ರನು ರಸ್ತೆಯಲ್ಲಿ ನಡೆದು ಬರುತ್ತಾನೆ. ಅವನ ಮುಖವು ಹರ್ಷದಿಂದ ಅರಳಿದೆ.)

ನಾಗೇಂದ್ರ (ಸ್ವಗತ):—ಇದೇನಿದು ! ನಾನು ನನ್ನ ಪ್ರೇಯಸಿಯಿಂದ ಅನತಿ ದೂರದಲ್ಲಿದ್ದರೂ ನನ್ನ ಮನಸ್ಸು ಏಕೊ ಶಂಕೆಯಿಂದ ತುಂಬಿದೆಯಲ್ಲ. ಅತಿಯಾದ ಹರ್ಷದಿಂದೇನಾದರೂ ಹೀಗಾಗಿರಬಹುದೆ ? ಛೆ ! ಎಲೆ ಶಂಕೆಯೆ, ದೂರವಾಗಿರು.

ನಾನು ನಿರ್ಭೀತನಾಗಿರಬೇಕು—ಆದರೂ ನನ್ನ ಎದೆ ಭಯಭರಿತವಾಗಿದೆ. ಕಳವಳದ ಕಾರಣವೇನೊ ತಿಳಿಯೆನಲ್ಲ.

[ಕಿಟ್ಟು Coming events ಅನ್ನೊಗಾದೆಗೆತಕ್ಕಹಾಗಿದೆ ಈಸ್ವಾಗತ.ಅಲ್ಲವೆ]

(ಹೀಗೆ ಮಾತನಾಡಿಕೊಳ್ಳುತ್ತ ನಾಗೇಂದ್ರನು ನಾಗಿನಿಯ ಮನೆಯ ಮುಂದೆ ಬರುವ ಹೊತ್ತಿಗೆ ಸರಿಯಾಗಿ ವಧೂವರರೂ, ಅವರ ತಾಯ್ತಂದೆಗಳೂ ಮನೆಯೊಳಗಿಂದ ಬರುತ್ತಾರೆ.)

ನಾಗೇಂದ್ರ (ವಧುವನ್ನು ದಿಟ್ಟಿಸಿ ನೋಡುತ್ತ, ಎದೆಯೊಡೆವ ಧ್ವನಿಯಲ್ಲಿ):--ನಾಗಿನಿ !

ನಾಗಿನಿ:—ನಾನು ನಿನಗೆ ಕೊಟ್ಟ ವಚನವನ್ನು ಕಾಪಾಡಿಕೊಳ್ಳಲಾರದೆಹೋದೆ. ಇನ್ನು ಬದುಕಿರಲಾರೆ. ಇಕೊ, ಈ ಉಂಗುರದಲ್ಲಿರುವ ವಿಷವೆ ನನ್ನ ಮೃತ್ಯುವಾಗಲಿ. (ಎನ್ನುತ್ತ ತನ್ನ ಬೆರಳಿನಿಂದ ಉಂಗುರವನ್ನು ತೆಗೆದು ನುಂಗುವಳು.)

ವರ:—ನಾಗಿನಿ ! ನಾಗಿನಿ !! ಹಾ, ಸರ್ವನಾಶ !!! (ನಾಗಿನಿ ಬೀಳುತ್ತಾಳೆ ವರನು ರೋಷದಿಂದ ನಾಗೇಂದ್ರನ ಕಡೆ ನುಗ್ಗುತ್ತಾ) ಎಲವೊ, ಘಾತಕ !

ನಾಗೇಂದ್ರ:—ಛಿ, ನೀಚ ! ದೂರವಾಗಿರು.

ವರ:—ಸ್ತ್ರೀ ಹತ್ಯಾಕಾರಿಯಾದ ನಿನ್ನನ್ನು ಈಗಲೆ ಯಮಲೋಕಕ್ಕೆ ಕಳುಹಿಸುತ್ತೇನೆ (ಎನ್ನುತ್ತ ತನ್ನ ಸೊಂಟದಿಂದ ಕಠಾರಿಯನ್ನು ಸೆಳೆದು ನಾಗೇಂದ್ರನಮೇಲೆ ಬರುತ್ತಾನೆ.)

ನಾಗೇಂದ್ರ:---ಇರಲಿ. ನನಗೆ ಸ್ವಾಗತ ಕೊಡಲು ನೀನೆ ಅಲ್ಲಿ ಮುಂಚೆ ಹೋಗಿರು (ಎನ್ನುತ್ತ ತನ್ನ ಜೇಬಿನಿಂದ ಪಿಸ್ತೂಲನ್ನು ತೆಗೆದು ವರನನ್ನು ಹೊಡೆದು ಹಾಕುತ್ತಾನೆ.)

ನಾಲ್ವರು ತಾಯ್ತಂದೆಗಳೂ (ಏಕ ಕಂಠದಿಂದ):--ಹಾ, ದೈವವೆ !

ನಾಗೇಂದ್ರ:---ಎಲೌ ಮೂಢ ವೃದ್ಧರೆ, ನೀವೂ ಬದುಕಿರಲು ಅನರ್ಹರು. (ಅವರನ್ನೂ ಸಹ ಪಿಸ್ತೂಲಿನಿಂದ ಹೊಡೆದುಹಾಕುತ್ತಾನೆ. ಅಷ್ಟು ಹೊತ್ತಿಗೆ ಸರಿಯಾಗಿ ಒಬ್ಬ ಪೋಲೀಸ್ ಆಫೀಸರ್ ಆ ಜಾಗಕ್ಕೆ ಬರುತ್ತಾರೆ. ಆತನನ್ನು ನೋಡಿ ನಾಗೇಂದ್ರ:-) ಇನ್ನು ತಡಮಾಡಬಾರದು. ನಾಗಿನಿ, ದೇವಲೋಕದಲ್ಲಿ ನಿನ್ನನ್ನು ಬೇಗನೆ ನೋಡುತ್ತೇನೆ. (ಪಿಸ್ತೂಲನ್ನು ಎದೆಗಿಟ್ಟುಕೊಂಡು ಹಾರಿಸುತ್ತಾನೆ. ಆದರೆ ಅದರಲ್ಲಿ ಮದ್ದಿಲ್ಲ) ಛೆ ! (ಎನ್ನುತ್ತ ಅದನ್ನು ಎಸೆದು, ಇನ್ನೊಂದು ಜೇಬಿನಿಂದ ಒಂದು ಸೀಸೆಯುಲ್ಲಿ ತುಂಬಿರುವ ವಿಷವನ್ನು ತೆಗೆದು ಕುಡಿದು ಪ್ರಾಣತ್ಯಾಗ ಮಾಡುತ್ತಾನೆ.)

ಪೋ. ಆ.:---ಏಳು ಜನರ ಜೀವಗಳು ಹಾರಿಹೋಗಿವೆ. ಅವರು ಇಹದ ಅಮೃತವನ್ನು ಹುಡುಕಿದರು. ನಾನೂ ಗುಂಡಿನ ಸದ್ದು ಕೇಳಿ ಇಲ್ಲಿಗೆ ಬಂದೆ. ನನ್ನ ಆಸೆ ಸಹ ನೆರವೇರಲಿಲ್ಲ. ಎಲ್ಲ ದೈವ ನಿಯಾಮಕ.

ನಾನು ಕೇಳಿದೆ, "ಇದೆಲ್ಲ ಸರಿ, ಕಿಟ್ಟು ; ಮೊದಲನೆ ದೃಶ್ಯದಲ್ಲಿ ವೀಣೆ ಏಕೆ ? ಕಡೆಯುವರಲ್ಲಿ ಫಿರಂಗಿ ಸದ್ದೇಕೆ ? " ಅದಕ್ಕೆ ಕಿಟ್ಟು, " ಅದು ಬ್ಯಾಕ್ ಗ್ರೌಂಡ್ ಮ್ಯೂಸಿಕ್ ತರಹ" ಅಂದ. ಶಾಮಿ ಮುಖದ ಮೇಲೆ ಜಯದ ನಗೆ ಕಿವಿಯಿಂದ ಕಿವಿಯವರೆಗೂ ಹರಡಿತ್ತು.

ಬೆ. ಚಂ.

# ಷಹರಿನ ಸ್ನೇಹಿತನೊಬ್ಬನಿಂದ ಬಂದ ಕಾಗದ

ಪ್ರಿಯಮಿತ್ರ,

"ನಮ್ಮ ಕಛೇರಿಯ ಕಾಗದಗಳನ್ನೆಲ್ಲಾ ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಅಂಚೆ ಕಛೇರಿಗೆ ತೆಗೆದುಕೊಂಡುಹೋಗಿ ರವಾನಿಸುವುದು ನನ್ನದೊಂದು ಕೆಲಸ. ದಿನಾಲೂ ಅಲ್ಲಿಗೆ ಹೋಗುವ ಹೊತ್ತಿಗೆ ನನ್ನಂತೆಯೇ ಇನ್ನೊಬ್ಬ ಜವಾನನು ಅಂಚೆ ಕಛೇರಿಗೆ ಬಂದು ಹತ್ತು ಹದಿನೈದು ಕಾಗದಗಳನ್ನು ರವಾನಿಸುತ್ತಿದ್ದನು. ಅಲ್ಲದೆ ಮೂರು ನಾಲ್ಕು ದಿನಗಳಿಗೊಮ್ಮೆ ಹತ್ತು ಹನ್ನೆರಡು ರೂಪಾಯಿನ ಸ್ಟಾಂಪುಗಳನ್ನು ಕೊಳ್ಳುತ್ತಿದ್ದನು. ಯಾವ ಕಛೇರಿಯ ನೌಕರನು ಇವನು ಎಂದು ನನಗೆ ಬಹಳ ಅನುಮಾನ, ಏಕೆಂದರೆ ಈತನು ಯಾವಾಗಲೂ ಅಂದ ಚೆಂದದ ಉಡುಪನ್ನೇ, ಧರಿಸುತ್ತಿದ್ದನು. ಅವನ ಕಛೇರಿಗೆ ನಾನೂ ವರ್ಗಾಯಿಸಿಕೊಂಡರೆ ನನ್ನ ಹಣ ಕಾಸಿನ ಅಂತಸ್ತು ಸ್ವಲ್ಪಮಟ್ಟಿಗಾದರೂ ಹೆಚ್ಚಬಹುದೇನೊ ಎಂಬ ಚಪಲದಿಂದ ಅವನ ಸ್ನೇಹವನ್ನು ಸಂಪಾದಿಸಿದೆ. ನಂತರ ತಿಳಿಯಬಂತು ಅವನು ಕಛೇರಿಯ ನೌಕರನಲ್ಲವೆಂದೂ, ಪ್ರಸಿದ್ಧರಾದ ಶ್ರೀಯುತ ಸುಖಶಾಯೀ ಪಂಡಿತರ ಸೇವಕನೆಂದೂ- ಸುಖಶಾಯೀ ಪಂಡಿತರು ಕೆಂಪುಶಾಯಿ ಕಪ್ಪುಶಾಯಿ ಜಾತಿಗೆ ಸೇರಿದವರಲ್ಲನೆಂದೂ, ಕ್ಷೀರಶಾಯಿ ವರ್ಗದವರೆಂದೂ ಆ ಮೊದಲೇ ನನಗೆ ತಿಳಿದಿದ್ದಿತು. ಊರವರಾರೂ ಶ್ರೀಯುತ ಪಂಡಿತರ ಹತ್ತಿರ ಹೆಚ್ಚಾಗಿ ಹೋಗುತ್ತಿರಲಿಲ್ಲ. ಆದರೂ ಇಷ್ಟು ಜರ್ಬಿನ ಸೇವಕನನ್ನಿಟ್ಟುಕೊಂಡು ಇಷ್ಟು ರೂಪಾಯಿಗಳನ್ನು ಅಂಚೆಗೋಸ್ಕರ ವೆಚ್ಚಮಾಡುವುದು ಹೇಗೆ ಎಂಬ ಅನುಮಾನ ಸಹಜವಾಗಿಯೇ ಬಂತು. ಅವನ ಸೇವಕನ ಸ್ನೇಹವು ತಕ್ಕಮಟ್ಟಿಗೆ ಮುಂದುವರಿದಮೇಲೆ ಧೈರ್ಯವಾಗಿ ಆತನನ್ನೇ ಕೇಳಿದೆ "ನಿಮ್ಮ ಯಜಮಾನರು ಹೇಗೆ ಹಣ ಸಂಪಾದಿಸುತ್ತಾರೆ. ಹೇಗೆ ಈ ಖರ್ಚನ್ನೆಲ್ಲಾ ತಡೆಯಲು ಸಾಧ್ಯ?"

ಆತನು ಹೇಳಿದುದನ್ನು ಹಾಗೆಯೇ ಹೇಳುತ್ತೇನೆ.

'ನೋಡ್ರೀ, ನಮ್ಮ ಯಜಮಾನರು ಬಲು ಚೂಟಿಯವರು. ಇದೇ ಊರಿನವರಾದರೂ, ಕಣಿವೆ ಕೆಳಗಿನ, ಪುರಾತನ ಕಾಲದ ಊರಾದ ಪಟ್ಟಾಯಂನವರೆಂದೂ, ತಲೆತಲಾಂತರವಾಗಿ ಅವರುಗಳು ಪಂಡಿತರೆಂದೂ, ನಿರ್ವೀರ್ಯರಾದವರಿಗೆ ಇವರುಗಳು ದೇವರೋಪಾದಿಯೆಂದೂ ಬೇಕಾದಷ್ಟುಮಟ್ಟಿಗೆ ಜಾಹೀರಾತು ಮಾಡಿಸುತ್ತಾರೆ. ಅದಕ್ಕೇ ಕಡೆಯಪಕ್ಷ ತಿಂಗಳಿಗೆ ಮುನ್ನೂರು ರೂಪಾಯಿ ವೆಚ್ಚಮಾಡುತ್ತಾರೆ. ನಂತರ ಸರ್ಕಾರಿ ಕೆಲಸಗಾರರ ಪಟ್ಟಿಯೊಂದನ್ನು ತರಿಸಿ, ಐವತ್ತು ವರ್ಷ ಮೀರಿದ, ಐನೂರು ರೂಪಾಯಿ ವರಮಾನ ಇರುವ ಜನರಿಗೆಲ್ಲಾ ಗುಪ್ತವಾಗಿ ಒಂದೊಂದು ಕಾಗದವನ್ನು ಬರೆಯುತ್ತಾರೆ. ಅವರೆಲ್ಲರೂ ತಮ್ಮನ್ನು

ಗುಟ್ಟಾಗಿ ಕಾಣಬಹುದೆಂದೂ, ಅವರ ಪುರೋಭಿವೃದ್ಧಿಯನ್ನು ತಾವು ಖಂಡಿತವಾಗಿಯೂ ನೋಡಿಕೊಳ್ಳುವರೆಂದೂ ಹೇಳುತ್ತಾರೆ. ಹತ್ತಕ್ಕೆ ಒಂದರಂತೆ ಮೀನು ಬಲೆಗೆ ಬೀಳುತ್ತದೆ. ಕೆಲವು ಮಠಾಧಿಕಾರಿಗಳಂತೆ ಒಂದು ತಿಂಗಳ ಸಂಬಳ ಇಸುಕೊಂಡು ತಮ್ಮ ಔಷಧಿ ಪ್ರಯೋಗ ಮಾಡುತ್ತಾರೆ. ಅವರ ಆಪ್ತ ಕಾರ್ಯದರ್ಶಿಗಳೆಂದರೆ ತಾರಾನಟಿ ಸುತಾರಾಬಾಯಿಯವರು. ಪಂಡಿತರು ತಮ್ಮ ಆಪ್ತಕಾರ್ಯದರ್ಶಿಗಳೊಡನೆಯೇ ರೋಗಿಯನ್ನು, ಮೊದಲು ನೋಡುವುದು. ಅಚ್ಚುಕಟ್ಟು ಬಟ್ಟೆಯುಟ್ಟ ನಮ್ಮ ಪಂಡಿತರನ್ನೂ ಅವಿಲ್ಲದ ಕಾರ್ಯದರ್ಶಿಯನ್ನು, ಅವರುಗಳ ಮಾತನ್ನು ಕೇಳಿದ ರೋಗಿಗೆ 'ಏನೋ ತನ್ನ ಖಾಯಿಲೆಯು ಸ್ವಲ್ಪ ಗುಣಮುಖವಾದಂತೆಯೇ' ತೋರುತ್ತದೆ. ಅದಾದಮೇಲೆ ಮಿಕ್ಕ ಸುಲಿಗೆ ಸುಲಭ. ಮೂರು ತಿಂಗಳಾಗುವ ಹೊತ್ತಿಗೆ ರೋಗಿಯು ಮಾರ್ವಾಡಿ ಮನೆಗೆ ಸಾಯಂಕಾಲ ಹೋಗುವಂತಾದಮೇಲೆ, ಪಂಡಿತರು ಕಬ್ಬಿನ ಜಲ್ಲೆಯನ್ನು ಹೀರಿ ಎಸೆವಂತೆ ರೋಗಿಯನ್ನು ಕೈಬಿಡುತ್ತಾರೆ. ಆದರೆ ಆ ವೇಳೆಗೆ ಪಂಡಿತರ ಖರ್ಚೆಲ್ಲವೂ ಕಳೆದು ಬ್ಯಾಂಕಿನ ಲೆಕ್ಕವು ಏರಿಹೋಗಿರುತ್ತೆ. ಹೀಗೆಯೇ ಕಳೆದ ಹತ್ತು ಹನ್ನೆರಡು ವರ್ಷಗಳಿಂದಲೂ ನಡೆದುಕೊಂಡು ಬಂದಿದೆ. ಈ ವ್ಯಾಪಾರವು ಇನ್ನೂ ಮೇಲ್ಮುಖವಾಗಿದೆಯೇ ಹೊರತು ಕೆಳಮುಖವಾಗಿಲ್ಲ. ಈಗೀಗ ಪಟ್ಟೆಗಳನ್ನು ಹುಡುಕುವುದರ ಬದಲು, ಅಂತಹವರ ವಿಳಾಸ ಕೊಟ್ಟವರಿಗೆ ತಲೆಗೆರಡು ರೂಪಾಯಿಯಂತೆ ಬಹುಮಾನ ಕೊಡುತ್ತಾರೆ. ನಾನೂ ಆ ರೀತಿಯಲ್ಲಿ ತಿಂಗಳಿಗೆ ಐವತ್ತು ಅರುವತ್ತು ರೂಪಾಯಿ ಸಂಪಾದಿಸುತ್ತೇನೆ, ನೀನೇನಾದರೂ ಆ ತೆರನಾದವರ ವಿಳಾಸ ಕೊಟ್ಟರೆ, ನಿನಗೆ ನನ್ನ ಪಾಲಿನ ಹಣದಲ್ಲಿ ಅರ್ಧ ನಿನಗೆ ಕೊಡುತ್ತೇನೆ" ಎಂದನು.

ಷಹರಿನ ಜೀವನವು ನನ್ನಂತಹ ಜವಾನನಿಗೆ, ಹನ್ನೆರಡು ರೂಪಾಯಿನವನಿಗೆ ಮಸ್ವಾಧ್ಯ. ಈ ಉಪಾಯದಲ್ಲಿ ನಾನೂ ಭಾಗಿಯಾಗಿ ವರ್ತಕರು, ಬ್ಯಾಂಕಿನ ನೌಕರರೂ, ಹಳೆಯ ಮಾರ್ವಾಡಿಗಳು, ಸಾಧುಗಳು, ಗೋದುಗಳೂ, ಎಲ್ಲರ ವಿಳಾಸವನ್ನು ಕೊಟ್ಟು ಕೊಟ್ಟು, ನನ್ನ ಜೀವನವನ್ನು ತಕ್ಕಮಟ್ಟಿಗೆ ನಡೆಸಿಕೊಳ್ಳುತ್ತಿದ್ದೇನೆ. ಅಲ್ಲದೆ ಒಂದು ಸಣ್ಣ ಗುಡಿಸಿಲನ್ನು ಕಟ್ಟಿಸಿಕೊಂಡಿದ್ದೇನೆ. ಈ ಕಾರಣದಿಂದಲೇ ನನ್ನ ಮನೆಯ ಹೆಸರು 'ಸುಖಶಾಯಿ ಕೃಪ' ಎಂದು.

ನೀನೂ ನಮ್ಮೂರಿಗೆ ಬಂದುದಾದರೆ ಇಂತಹ ವ್ಯಾಪಾರಗಳಲ್ಲಿ ಸೇರಿ ಸುಖವಾಗಿರಬಹುದು, ಹಳ್ಳಿಯಲ್ಲೇ ಕುಳಿತು ಓದಿದವನೆಂದು ಶಾಲೆಯ ಮಾಸ್ತರಗಿರಿ ಮಾಡುವ ಬದಲು, ನನ್ನಂತೆ ಷಹರಿಗೆ ಬಂದು, ಓದಿದ್ದೇನೆಂಬ ಅಹಂಕಾರವನ್ನು ಬಿಟ್ಟು ಎಲ್ಲಿಯಾದರೂ ಜವಾನ ಚಾಕರಿಗೆ ಸೇರಿಕೊಂಡು, ಮಿಕ್ಕ ಹವ್ಯಾಸಗಳಿಲ್ಲದೆ, ಸುಖಪಡಬಾರದೆ?

ಇಲ್ಲಿ ಎಲ್ಲರೂ ಕ್ಷೇಮ. ನೀವುಗಳೆಲ್ಲರೂ ಹಾಗೆಯೇ ಕ್ಷೇಮವೆಂದು ನಂಬುವ,

'ಸುಖಶಾಯಿಕೃಪ' ನಿಮ್ಮ
ವಿಲಾಸನಗರಿ **ಬಿ. ತನಯ.**
ವಸಂತಋತು

# ಒಡಕು ಮಡಿಕೆ

ಕುಪ್ಪ ತನ್ನ ಅಪ್ಪನ ಔದಾರ್ಯವನ್ನು ಕೊಂಡಾಡುತ್ತಾ ಕೋಟಿನ ಗುಂಡಿಗಳನ್ನು ಸಿಕ್ಕಿಸಿಕೊಂಡು, ಆತನ ಹಿಂದೆ ಸಿನೀಮಾಗೆ ಹೊರಟ. ಇವರು ಹೋಗಿ ಕೂಡುವ ವೇಳೆಗೆ ಸಿನಿಮಾ ಇನ್ನೂ ಆರಂಭವಾಗಿರಲಿಲ್ಲ.

ಕುಪ್ಪ "ಅಪ್ಪಾ!'' ಅಂದ,

"ಏನಪ್ಪ?"

"ಯಾಕಪ್ಪ ಈ ಬೀಸಣಿಗೆ ಸುತ್ತ್ತಾ ಇಲ್ಲ?"

"ಕೆಟ್ಹೋಗಿರಬೇಕು ಇದು''

' ಹಾಗಾದ್ರೆ ಬಾಕಿ ಎಲ್ಲಾ ಯಾಕೆ ಕೆಟ್ಟಿಲ್ಲ"

"ಅದು- ಹಾಗೆ ಒಂದೊಂದ್ಸಲ"

''ಕೆಡೆದೇ ಇರೋ ಬೀಸಣಿಗೆ ಕೆಳಗೆ ಹೋಗೋಣ್ವೇ?''

"ಬೇಡ ಇಲ್ಲಿ ಬೆಚ್ಗಿದೆ''

ಒಂದು ನಿಮಿಷ ನಿಶ್ಯಬ್ದ.

"ಅಪ್ಪ, ಮೇಲ್ಹೋಗೋಣವೇ? '

''ಬೇಡ, ಆಲ್ಹೋಗ ಬಾರದು"

"ಮತ್ತೆ ಅವರೆಲ್ಲಾ ಇದ್ದಾರಲ್ಲ?"

"ಅವರೆಲ್ಲಾ ಜಾಸ್ತಿಕಾಸು ಕೊಟ್ಟಿದ್ದಾರೆ''

''ಮೇಲ್ಹೋದ್ರೆ ಅವರ ತಲೆ ಹೆಂಚಿಗೆ ತಗುಲಿ.... ಅಪ್ಪ ಇದ್ಯಾಕಪ್ಪ, ಈ ಸಿನಿಮಾಗೆ ಹೆಂಚೇಇಲ್ಲ?''

"ಇದೆ, ಮೇಲಿದೆ"

''ಮೇಲೆ ಮತ್ತೆ, ಇಲ್ಲಲ್ಲಪ್ಪ?''

"ಅದರ ಮೇಲಿದ್ಯೆ!"

''ಯಾಕಪ್ಪ ಎರಡು ಹೆಂಚು ಈ ಸಿನಿಮಾಗೆ?''

''ಅದು....ಯಾಕೆಂದ್ರೆ ....ನೀ ಸ್ವಲ್ಪ ಸುಮ್ನಿರು ನೋಡೋಣ. ಎರಡು ನಿಮಿಷ ಮಾತಿಲ್ಲ.

''ಅಪ್ಪ?''

"ಆ!"

''ಇನ್ನೂ ಯಾಕೆ ಷುರು ಆಗಿಲ್ಲ?''

''ಇನ್ನೂ ಹತ್ತು ನಿಮಿಷ ಇದೆ''

....ಅಪ್ಪಾ, ಅಲ್ನೋಡು, ಈಗ ಬಂದವ್ರು ಎಷ್ಟು ದಪ್ಪ!....!!

"ಥೂ ಹಾಗೆಲ್ಲ ಕೈ ತೋರಿಸ್ತಾರೆಯೇನೋ?''

''ತೋರ್ಸಲ್ಲ. ನೋಡಪ್ಪ ಎಷ್ಟುದಪ್ಪ ಅಲ್ಲ! ಅಯ್ಯೋಅಯ್ಯೋ! ಅವ್ರು ಕುರ್ಚೀಲಿ ಹಿಡಿಸೋದೆ ಇಲ್ಲ. ಅಲ್ನೋಡಪ್ಪ! ಅಪ್ಪ, ಅಲ್ನೋಡು ಅವರ್ನ...."

"ಸುಮ್ನಿರ್ತಿಯೋ ಇಲ್ಲೋ ನೀನು ಈ ಕಡೆ ತಿರುಗು"

"ಎಷ್ಟು ತಿರ್ಗಿದ್ರೂ ಕಾಣಿಸ್ತಾರೆ ಅವ್ರು ಭಾಳದಪ್ಪ....ಓ ಓ, ಅವರು ಎದ್ದು ನಮ್ಮತ್ರ ಬಂದ್ರು ...ಬಂದ್ರು....ನಂಪಕ್ಕದಲ್ಲೇ ಕೂತ್ರು....ಮುರೀತು ಮುರೀತು ಕುರ್ಚಿ!"

"ಸುಮ್ನೀರೋ, ಕತ್ತೆ''

"ಹು. ಸುಮ್ನಿರ್ತೀನಪ್ಪ" ಎರಡುನಿಮಿಷ ಮಾತ್ರ,

"ಯಾಕಪ್ಪ ಒಬ್ಬೊಬ್ರು ದಪ್ಪಕ್ಕಾಗುತ್ತಾರೆ?''

"ಹಾಗೇ ಅವ್ರು....ತುಂಬ ತಿನ್ತಾರೆ''

''ಮತ್ತೆ ಅಜ್ಜಿ ಒಂದ್ಸಾರ್ತಿ ಅನ್ನ ಸುರ್ಕೊಂಡು ತಿಂತಾ ಇದಾಳಲ್ಲ. ಯಾಕೆ ದಪ್ಪಕ್ಕಾಗಿಲ್ಲ....?"

''ಕತ್ತೆ! ಹಾಗೇ ಹೇಳ್ತೀಯಾ ಅಜ್ಜೀನಾ?''

''ಇಲ್ಲ ಅಪ್ಪ!....ನಿಜವಾಗ಼್ೂ ಇಷ್ಟಿಷ್ಟು ಸುರ್ಕೊಂಡು...."

''ಅವರ ಟೈ ನೋಡಪ್ಪ, ಟೇಬಲ್ ಇದ್ದಾಗಿದೆ''

"ಸುಮ್ನಿರ್ತಿಯೋ ಹೊ ರ ಡ್ತಿ ಯೋ ಮನೆಗೆ!''

''ಇಲ್ಲಪ್ಪ....ಹೊಟ್ಟೆಮೇಲೆ ಏನಾರ ಇಟ್ಕೊಂಡು ಬರಿಯೋಕಾಗತ್ತಾ ಅಪ್ಪ?''

''ಆಗಲ್ಲ''

"ಇವರ್ಹೊಟ್ಟೆ ಇದ್ದಾಗಿದ್ರೆ!"

''ಆಗುತ್ತೆ ಸುಮ್ನೆ ಇರು"

"ಮತ್ತೆ ಯಾಕೆ ಅವ್ರು ಬರೀತಾ ಇಲ್ಲ?"

"ಬಾಯಿಮುಚ್ಕೊಂಡು ಕೂ ತ್ಕೊಳ್ಳೋಕೆ ಆಗಲ್ವೇನೋ?" ಸ್ವಲ್ಪ ಹೊತ್ತು ಮಾತಿಲ್ಲ.

"ಅಪ್ಪ"

''.............."

''ಅಪ್ಪ!"

"........................"

"ಆರುವರೆ ಆಯ್ತಲ್ಲ ಆ ಗಡಿಯಾರ್ದಲ್ಲಿ, ಇನ್ನು ಯಾತಕ್ಕೆ ಶುರು ಆಗ಼್ೀ ಇಲ್ಲ ಸಿನಿಮಾ?''

"ಇನ್ನೇನು ಆಗುತ್ತೆ ಇರು''

''ಓ, ಗಂಟೆ ಹೊಡೀತು....ಯಾಕೆ ಇನ್ನು ಶುರು ಆಗಿಲ್ಲಪ್ಪ"

''ತಾಳು ಆಗುತ್ತೆ''

"........ಆಗ್ಲಿಲ್ಲಪ್ಪ?"

"ಆಗುತ್ತೆ ಇರೋ''

"ಮತ್ಯಾಕೆ ಬೆಲ್ಹೊಡೀಬೇಕು? ಅಪ್ಪ ಆಗೋ ಬಾಗ಼್ಿಲ್ಲಾ ಮುಚ್ತಾ ಇದ್ದಾರೆ. ಶುರು ಆಗುತ್ತೆ ಅಲ್ಲ....?''

* * *

ಸದ್ಯಕ್ಕೆ ಸಾಕು. ಹೆಚ್ಚಾದರೆ ಕಾಗ್ದದ ಬೆಲೆ ಜಾಸ್ತಿ. ಅದೂ ಅಲ್ದೆ, ಈಕಾಗದಗಳ್ನ ಸಂಪಾದಕರು ದೋಸೆಬರಸಿಕೊಳ್ಳೋಕೆ ಅಂತ ಒಂದು ಕಡೆ ಶೇಖರಿಸಿಯಾರು! ಎಲ್. ಎಸ್. ಪಿ.



# ರಂಗಣ್ಣ ಬರದದ್ದು



ಕಾಲೇಜಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ನಾನು ವಿಶು ಸಂಗಡ ಸೋಮಾರಿ ಗಲ್ಲಿಯಲ್ಲಿ ಒಂದು ರೂಂ ಮಾಡಿಕೊಂಡಿದ್ದೆ. ಈಗಲೀಗ ನವನಾಗರಿಕ ತರುಣರಿಗೆ ಕಾಲದೇವತೆ ಒದಗಿಸಿರುವ ಹವ್ಯಾಸಗಳು ನಮಗೆ ಆಗ ನಾಸ್ತಿಯಾಗಿದ್ದರೂ, ನಾವೂ ತಕ್ಕ ಮಟ್ಟಿಗೆ "ಪೋಲಿ"ಗಳೆನಿಸಿಕೊಂಡಿದ್ದೆವು! ಸಿನಿಮಾಗಳ ಸದ್ದೇ ಇರಲಿಲ್ಲ. ಆಗ; ಏಕೆ? ಸದ್ದಿಲ್ಲದ ಸಿನಿಮಾ ಕೂಡ ಇನ್ನೂ ತಲೆ ಎತ್ತಿರಲಿಲ್ಲ. ಊರಿಂದ ಊರಿಗೆ ಭೂಂಕರಿಸುತ್ತಾ ಧೂಳೆಬ್ಬಿಸಿ ಹೋಗುವ ಬಸ್ಸು ಇರಲಿಲ್ಲ. ಎತ್ತಿನ ಗಾಡಿಗಳೇ ಗತಿ! ಮಾವನ ಮನೆಗೆ ಹೋಗಬೇಕಾದರೂ ಅಷ್ಟೆ; ಮತ್ತೆ ಯಾವ ಕೆಲಸಕ್ಕಾದರೂ ಅಷ್ಟೆ. ಅಥವಾ, ಬೆಂಗಳೂರು ಮುಂತಾದ ನಗರಗಳಲ್ಲಿ ಜಟಕಾಗಾಡಿ ಗಡಬಡಾಯಿಸುತ್ತಾ ಒಳಗಿದ್ದವರ ಎಲುಬುಗಳನ್ನು ಪುಡಿ ಮಾಡುತ್ತಿದ್ದುವು. ಆಗಿನ್ನೂ ಹಾಸ್ಟಲುಗಳೇ ಇರಲಿಲ್ಲ. ಹಳ್ಳಿ ಕಡೆಯಿಂದ ಬಂದ ನಮ್ಮಂಥ ಹುಡುಗರು ಯಾವುದಾದರೂ ಮನೆ ಮುಂದಿನ ಕೋಣೆಗಳನ್ನು ಬಾಡಿಗೆಗೆ ತೆಗೆದುಕೊಂಡು, ಚಾಪೆ ಮೇಲೆ ಚಿಮ್ಮಣಿ ಹಣತೆಯ ಮುಂದೆ ಅರ್ಧ ಮಲಗಿ ಮಂಡಿಯೂರಿ ಬರೆದು ಪಾಸು ಮಾಡುತ್ತಿದ್ದೆವು

ಬೆಳಗ್ಗೆ ಎದ್ದು ಹೋಟಲುಗಳಿಗೆ ಹೋಗಿ ಉಪ್ಪುಹಿಟ್ಟು, ಕಾಫಿ ಆಹಾರ. ಆಗಿನ್ನೂ ಎಲ್ಲವೂ 'ಹೋಟಲು'ಗಳೇ ಆಗಿದ್ದುವು, ಹೊರ ದೇಶದ ಆನಂದಭವನಗಳಾಗಿರಲಿಲ್ಲ. ಉಪ್ಪುಹಿಟ್ಟಿಗೆ ಹೊಸ ಹೆಸರುಗಳನ್ನು ಪತ್ತೆ ಪಚ್ಚಿ 'ಲವಣಾಕಾಬಾತ್ ಅಂತ ಹೇಳಲು ಆಗಿನವರು ನಾಚುತ್ತಿದ್ದರು. ಹಾಗಂದರೆ ನಮ್ಮ ಹಳೇ ಸ್ನೇಹಿತ ಉಪ್ಪಿಟ್ಟೇ ಎಂದು ಪತ್ತೆ ಹಚ್ಚಲು ಆಗಿನವರು ಎರಡಾಣೆ ಚಾರ್ಜು ಮಾಡುತ್ತಿರಲಿಲ್ಲ. "ಏಕಾದ್ಮಿ ಚಾರಾನಾ" ಎಂಬ ಆರ್ಭಟವಿಲ್ಲದೆ, ಸ್ವಸ್ಥವಾಗಿ ಹೊಟ್ಟೆ ತುಂಬ ತಿಂದು ಪುಸ್ತಕದಲ್ಲಿ ಗುರುತುಹಾಕಿ ಗಂಭೀರವಾಗಿ ಹೊರಬರುತ್ತಿದ್ದುವು. ಕಣ್ಣು ಮುಚ್ಚಿ ಕೊಳಾಯಿ ಒಳಗಿಂದ "ಕಲರು''ಗಳನ್ನೆಳೆಯದೆ ಕಾಫಿ ಬಣ್ಣವನ್ನು ಕಣ್ಣು ಬಿಟ್ಟು ನೋಡಿ ಕುಡಿಯುತ್ತಿದ್ದೆವು, ನಾವು. ಬ್ರಾಹ್ಮಣರಾದ ನಮಗೆ ಆಗ ಅಡಿಗೆ ಮನೆಯಲ್ಲೇ ಆಹಾರವೊದಗಿಸುತ್ತಿದ್ದರಿಂದ ಹೋಟಲಿಗೆ ಹೋದಾಗ ಹೊಗೆಯೂ ಹೊಟ್ಟೆಗೆ ಸೇರುತ್ತಿತ್ತು. ಏಳು ರೂಪಾಯಿಗೆ ಎರಡು ಹೊತ್ತು ಅನ್ನಸಾರು, ಆಗಾಗ್ಗೆ ಹೊಟ್ಟೆನೋವು, ವಾರಕ್ಕೊಂದು ಅಭ್ಯಂಜನ ಲಭಿಸುತ್ತಿತ್ತು. ರಾತ್ರಿ ಊಟಮಾಡಿ ಎಲೆ ಅಡಿಕೆ ಹಾಕಿಕೊಂಡು ಒಬ್ಬರ ಬೆನ್ನ ಮೇಲೆ ಒಬ್ಬರು ಗುದ್ದುತ್ತಾ ಪ್ರಹ್ಲಾದ ಚರಿತ್ರೆ ಹಾಡು ಹೇಳಿಕೊಂಡು ಆನಂದಪಡುತ್ತಿದ್ದೆವು. ವಿಶೂನೂ ಒಳ್ಳೇ ಹಾಸ್ಯಗಾರ. ಪೋಕರಿ ಅಂದರೆ ಸಾಕ್ಷಾತ್ ಗಜಪೋಕರಿ. ಹೋಗೋ ಬಾರೋ ಅಂತ

ಅವನು ಎಲ್ಲರನ್ನೂ ಮಾತನಾಡಿಸುತ್ತಾ ಕಂಡ ಕಂಡವರ ಬೆನ್ನ ಮೇಲೆಲ್ಲಾ ಮುಷ್ಟಿ ಬಿಗಿದು ಕುಟ್ಟುತ್ತಾ ಅವನು ಕಾಲೇಜಿಗೆಲ್ಲಾ ಏಕಮಾತ್ರ ವಿಶು ಆಗಿದ್ದ. ಕೀಟಲೆ ಮಾಡಲು ಹೊರಟಾಗ ಅವನ ಎಡಮುಖ ಕೊಂಚ ಸುಕ್ಕಾಗಿ ಎಡಗಣ್ಣು ಅರ್ಧ ಮುಚ್ಚಿಕೊಂಡು ಒಂದು ರೀತಿ ವಿಕಾರವಾಗುವುದು !

ನಮ್ಮ ಚರಿತ್ರೆ ಮೇಷ್ಟ್ರು ಪ್ರಚಂಡ ವ್ಯಕ್ತಿ. ಲೆಕ್ಕ ಕೂಡ ಬರುತ್ತಿತ್ತು ಅವರಿಗೆ. ಲೆಕ್ಕದ ಮೇಷ್ಟ್ರರಿಗೆ ಲಕ್ವಾ ಹೊಡೆದಾಗ ಮೂರು ತಿಂಗಳ ಕಾಲ ಬಿ. ಎ. ಕ್ಲಾಸಿಗೆ ಅವರೇ ಆ ಪಾಠ ಹೇಳಿದರು! ಅವರು ಬಂದರು ಅಂದರೆ ಸರಿ ಹುಡುಗರ್ರು ಗಪ್‌ಚಿಪ್ ಅಂತ ಬಾಯಿ ಮುಚ್ಚಿಕೊಂಡು ಬಾಲ ಮುದುರಿ ಕೂತು ಬಿಡುವರು. ಈಗಲೂ ನನಗೆ ಅವರನ್ನ ಕಂಡರೆ ಒಂದು ಬಗೆಯ ಗಾಬರಿ : ಎಲ್ಲಿ ನನ್ನ ಅಂಗಿ ಗುಂಡಿ ಕೈಯಲ್ಲಿ ಹಿಡಿದು ತಿರುಗಿಸುತ್ತಾ, ಲೋ ! ೧೭೪೮ ನೇ ಇಸವಿಯಲ್ಲಿ ಏನೇನು ನಡೆಯಿತು ಅಂತ ಕೇಳಿ ಬಿಡುತ್ತಾರೋ, ಅಂತ.

ವಿಶುವಿಗೆ ಒಂದು ಸಲ ತುಂಬಾ ರೇಗಿತು. ಚರಿತ್ರೆ ಮೇಷ್ಟ್ರು ರೇಖಾಗಣಿತ ಪಾಠ ಮಾಡುತ್ತಿದ್ದರು. ಅವರು ಕುಳಿತಲ್ಲೇ ಕುಕ್ಕರಿಸಿಕೊಂಡು, ''ವಿಶೂ ! ಬೋರ್ಡು ಹತ್ತಿರ ಬಾ ! ಕೃಷ್ಣಸ್ವಾಮಿ ! ಲೆಕ್ಕ ಹೇಳು.'' ಅಂತ ಗರ್ಜಿಸಿದರು. ''ಸಾಧ್ಯವಿಲ್ಲ, ಸಾರ್ ! ನಾನು ಹೇಳುತ್ತೇನೆ, ಕೃಷ್ಣಸ್ವಾಮಿ ಬರೆಯಲಿ ಬೋರ್ಡು ಮೇಲೆ" ಅಂದ, ವಿಶು ! ಯಾವತ್ತೂ ಆ ಮೇಷ್ಟ್ರರಿಗೆ ಹೀಗೆ ಯಾರೂ ಮುಖ ಮುರಿದಿರಲಿಲ್ಲ. ವಿಶು ತಲೆ ಮೇಲೆ ಸಿಡಿಲು ಬಡಿಯುತ್ತಿದೆ ಅಂತ ಎಲ್ಲರೂ ಸ್ತಬ್ಧರಾದರು !

"ಯಾಕೆ ?"

"ನನಗೆ ರೇಖಾಗಣಿತವನ್ನ ಬರೆಯುವುದಕ್ಕೆ ಬರುವುದಿಲ್ಲ."

"ಪರೀಕ್ಷೆಯಲ್ಲಿ ಏನು ಮಾಡುತ್ತೀಯಾ ?''

"ಕಾಗದ ಕಡ್ಡಿ ಅಂದರೆ ಆಗಬಹುದು ; ಸೀಮೆಸುಣ್ಣ ಬೋರ್ಡು ಅಂದರೆ ಅಸಾಧ್ಯ ?"

"ಮೇಷ್ಟ್ರಾದರೆ.... ಆಗ''

"ಅಂಥ ಕೆಲಸಕ್ಕೇ ನಾನು ಕೈಹಾಕುವುದಿಲ್ಲ, ಸಾರ್ !"

"ಹಾಗೋ ! ನಾನು ಕೈ ಹಾಕಿದೇನೆ. ಆದ್ದರಿಂದ, ನಿನಗೆ ಕಲಿಸಿಯೇ ಕಲಿಸುತ್ತೇನೆ....ರೇಖಾಗಣಿತದ ವಿಷಯವನ್ನ ಬೋರ್ಡಲ್ಲಿ ಬರೆಯುವುದಕ್ಕೆ....ಬಾ, ಇಲ್ಲಿ.... ಬೋರ್ಡು ಒರಸು.....ಆಯಿತೊ.....ಸೀಮೆಸುಣ್ಣ ತಕೋ.....ಹಾಗಲ್ಲ..... ಕೊಂಚ ಹೊರಕ್ಕೆ ಕಾಣಿಸಲಿ....ಹಾಗೆ....ಈಗ, ಅದನ್ನ ಹಿಡಿದುಕೊಂಡು ಬೋರ್ಡಿನ ಮೇಲೆ.... ಮುಟ್ಟಿಸು !"

ವಿಶುವಿಗೆ ತುಂಬಾ ರೇಗಿತ್ತು. ಅವನು ಬರೀ ಒಂದು ಚುಕ್ಕಿಯ ಗುರುತನು ಮಾತ್ರ ಹಾಕಿ ತನ್ನ ಪೀಠಕ್ಕೆ ಹಿಂತಿರುಗಿದ. ಆಗ, ಚರಿತ್ರೆ ಮೇಷ್ಟ್ರು "ಪರವಾ ಇಲ್ಲ

## ರಂಗಣ್ಣ ಬರದದ್ದು

ವಿಶು ! ಈಗ ನೀನು ರೇಖಾ ಗಣಿತದಲ್ಲಿ ಬಹು ಮುಖ್ಯವಾದ ಬಿಂದುವನ್ನು ಬರೆಯು ವುದಕ್ಕೆ ಕಲಿತ ಹಾಗಾಯಿತು....ಹೋಗು ! ನಿಂತಿರು ನಿನ್ನ ಜಾಗದಲ್ಲಿ'' ಅಂದರು. ವಿಶುವಿಗೆ ಅಪಮಾನದಿಂದ ಕಿವಿ ಕೂಡ ಕೆಂಪಗಾಯಿತು !

ಚರಿತ್ರೆ ಮೇಷ್ಟ್ರು ಅಂದರೆ ನಮಗೆ ಭಯ, ಭಕ್ತಿ, ವಿಶ್ವಾಸ. ಅವರಿಗೂ ಹಾಗೆಯೇ. ತಮ್ಮ ವಿದ್ಯಾರ್ಥಿಗಳ ಕುಲಗೋತ್ರ ಗುಣ ಅವಗುಣ ಎಲ್ಲವೂ ಅವರಿಗೆ ಗೊತ್ತಿತ್ತು. ಅವರಿಗೆ ಸಂಸ್ಥಾನದಲ್ಲೆಲ್ಲಾ ಸ್ನೇಹಿತರು. ಅವರಿಗಾಗಿ ಅವರು ತುಂಬಾ ಶ್ರಮವಹಿಸಿ ಉಪಕಾರ ಮಾಡುತ್ತಿದ್ದರು. ಅವರು ಮಾಡುತ್ತಿದ್ದ ಒಂದು ದೊಡ್ಡ ಉಪಕಾರವೆಂದರೆ ವರ ಗೊತ್ತು ಮಾಡುವುದು.

ನಾನೊಂದು ದಿನ ಕನ್ನಡ ಕ್ಲಾಸಿನಲ್ಲಿ ಹಾಯಾಗಿ ಕುಳಿತಿದ್ದೆ. ಜವಾನ ಒಳಗೆ ಬಂದು ನನಗೆ ಕೈ ಸನ್ನೆಮಾಡಿದ. ಚರಿತ್ರ ಮೇಷ್ಟ್ರು ಬರಹೇಳುತ್ತಾರೆ. ಅಂತ ಅವನು ಹೇಳುತ್ತಲೂ ನಾನು ೧೭೪೮ರಲ್ಲಿ ನಡೆದ ಸಂಭವಗಳನ್ನೇ ಬಾಯಲ್ಲಿ ಹೇಳುತ್ತ ಅವನ ಹಿಂದೆಯೇ ನಡೆದೆ.

ಅವರ ರೂಂನಲ್ಲಿ ರಂಗಣ್ಣನವರು-ಹಣೆಯಲ್ಲಿ ಕಣ್ಣು ಕುಕ್ಕುವನಾಮ, ತಲೆಯ ಮೇಲೆ ಸಿಂಬಿ, ಉದರದ ಸುತ್ತ ಒದ್ದಾಡುವ ವೆಯಿಸ್ಟ್‌ಕೋಟು, ಕರಂಡಕದ ಗಡಿ ಯಾರ, ನಶ್ಯದ ಭರಣಿ ಸಹಿತರಾಗಿ-ಕುಳಿತಿದ್ದರು.

"ಇವನೇ ಆ ಹುಡುಗ!" ಅಂದರು, ಮೇಷ್ಟ್ರು. ರಂಗಣ್ಣನವರು ಚೂಪು ನೋಟದಿಂದ ಎರಡು ಸಾರಿ ನನ್ನನ್ನ ವೀಕ್ಷಿಸಿದರು. ''ಹೋಗೋ ಕ್ಲಾಸಿಗೆಹೋಗು" ಅಂದರು, ಮೇಷ್ಟ್ರು.

ಆ ರೂಮಿನ ಹೊಸಲನ್ನು ದಾಟಿದಾಗ ಅವರಿಬ್ಬರೂ ಮಾತನಾಡುತ್ತಿದ್ದದ್ದು ನನಗೆ ಕೇಳಿಸಿತು.

"ಪರವಾ ಇಲ್ಲ"

"ಕಲ್ಯಾಣಿಗೆ ಸರಿಯಾದ ವರ"

[ಎಸ್. ವೀ.ವೀ.ಕೃತಂ]

[ಮುಂದಿನ ಸಂಚಿಕೆಯಲ್ಲಿ—''ಪರೀಕ್ಷೆ'']






# ಲೋದ್ರ

**ಗರ್ಭಾಶಯ ಟಾನಿಕ್**

ಅಕ್ರಮ ಮುಟ್ಟು, ಬಂಜೆತನ, ಗರ್ಭಜವಾಯು, ನಿದ್ರಾಭಂಗ, ಅಜೀರ್ಣ, ಮಲಬದ್ಧತೆ, ಕೆಮ್ಮು, ತಲೆನೋವು, ಬೆನ್ನುನೋವು ಮುಂತಾದುವನ್ನು ವಾಸಿ ಮಾಡುವುದು.

# ಅರ್ಕ

**ಶ್ರೇಷ್ಠ ಜ್ವರ ನಿವಾರಿಣಿ**

ಇನ್‌ಫ್ಲುಯಂಜಾ ಟೈಫಾಯಿಡ್, ಮಲೇರಿಯ ಮುಂತಾದ ಎಲ್ಲಾ ವಿಧವಾದ ಜ್ವರಗಳನ್ನೂ ಪ್ಲೀಹ ಮತ್ತು ಪಿತ್ತಕೋಶ ರೋಗಗಳನ್ನೂ ಗುಣಪಡಿಸುವುದು.

# ಅಮೃತ

**ರಕ್ತಶುದ್ಧಿ ಟಾನಿಕ್**

ಎನೀಮಿಯ, ಮಲಬದ್ಧತೆ, ಅಜೀರ್ಣ, ನಿಶ್ಶಕ್ತಿ, ಬುದ್ಧಿಮಾಂದ್ಯ, ಎದೆಯ ನಿಶ್ಶಕ್ತಿ, ಜ್ಞಾಪಕಶಕ್ತಿ ಇಲ್ಲದಿರುವದು, ದೃಷ್ಟಿ ಮಾಂದ್ಯ, ತಲೆ ತಿರುಗುವುದು, ಚರ್ಮರೋಗಗಳು ಮುಂತಾದುವನ್ನು ವಾಸಿಮಾಡುವುದು.

ಏಜಂಟರು :

**ಸಿಟಿ ಮೆಡಿಕಲ್ ಅಂಡ್ ಜನರಲ್ ಏಜನ್ಸಿ,**

**ಚಿಕ್ಕಪೇಟೆ,** — — **ಬೆಂಗಳೂರು ಸಿಟಿ**

# ಹುಲಿಗಳ ಗಲಿಬಿಲಿ



ಇತ್ತೀಚೆಗೆ ಮೈಸೂರು ಸರ್ಕಾರದವರು ಅರಣ್ಯ ಸಂಪತ್ತನ್ನು ಹೆಚ್ಚಿಸುವ ದೃಷ್ಟಿಯಿಂದ ಶಿಕಾರಿಗಾಗಿ ಕಾತುರರಾಗಿರುವ ದೇಶೀಯರೂ, ಪರದೇಶೀಯರೂ ಲೈಸೆನ್ಸು ಪಡೆದು ಕೆಲವು ಗೊತ್ತಾದ ನಿಬಂಧನೆಗಳಿಗೊಳಗಾಗಿ ಮಾತ್ರ ಬೇಟೆಯಾಡಬೇಕೆಂದು ಆಜ್ಞೆ ಹೊರಡಿಸಿದ್ದಾರೆ. ಈ ಆಜ್ಞೆಯೂ, ಅದರಲ್ಲಿ ಹೇಳಿರುವ ನಿಬಂಧನೆಗಳೂ ಮಲೆನಾಡಿನ ಅರಣ್ಯಗಳಲ್ಲಿ ವಾಸ ಮಾಡುತ್ತಿರುವ ವ್ಯಾಘ್ರ ಸಮೂಹಗಳಲ್ಲಿ ಒಂದು ರೀತಿಯ ಅಲ್ಲೋಲಕಲ್ಲೋಲವನ್ನು ಉಂಟುಮಾಡಿದೆ ಎಂದು ಹೇಳಿದರೆ ತಪ್ಪಾಗಲಾರದು. ಅಸ್ತಮಾನದಿಂದ, ಉದಯದವರೆಗೂ ಯಾರೂ ಹುಲಿ ಶಿಕಾರಿ ಮಾಡಕೂಡದು ಎಂದು ಸರ್ಕಾರದವರು ಆಜ್ಞೆ ಮಾಡಿರುವುದಕ್ಕಾಗಿ ಹುಲಿಗಳು ತುಂಬಾ ಕೃತಜ್ಞತೆಯುಳ್ಳವರಾಗಿದ್ದಾರೆ. ಅನೇಕ ಹುಲಿಗಳು ಹಗಲು ಹೊತ್ತಿನಲ್ಲಿ ನಿದ್ದೆ ಮಾಡುವುದನ್ನು ಹೊಸದಾಗಿ ಅಭ್ಯಾಸ ಮಾಡಿ ವನಪಕ್ಷಿಗಳೆಲ್ಲವೂ ಗೂಡು ಸೇರುವ ಮುಹೂರ್ತವನ್ನು ನಿರೀಕ್ಷಿಸುತ್ತಿದ್ದು, ಅನಂತರ ನಿರಾತಂಕವಾಗಿ ಓಡಾಡುತ್ತಾ ಗುಡ್ಡಗಳ ಅಂಚಿನಲ್ಲೇ ಹುಲ್ಲು ಮೆದೆಯ ಮೇಲೆ ಕನವರಿಸುತ್ತಾ ಮಲಗಿರುವ ಹುಲ್ಲೆಗಳನ್ನೇ ತಿಂದು ಜೀವಿಸಲು ನಿರ್ಧರಿಸಿವೆಯಂತೆ. ಎದೆ ಹಾಲನ್ನು ಹೀರುವ ಮರಿಗಳಿರುವ ತಾಯಿ ಹುಲಿಗಳನ್ನೂ ಬಸುರಿ ಬಾಣಂತಿಯರನ್ನೂ ಬಂದೂಕದಿಂದ ಸುಡಕೂಡದೆಂದು ಎಲ್ಲಾ ಶಿಕಾರಿಪ್ರಿಯರಿಗೂ ಸರ್ಕಾರದವರು ಆಜ್ಞೆ ಹೊರಡಿಸಿರುವರೆಂಬ ವಾರ್ತೆ ಹುಲಿಯಿಂದ ಹುಲಿಗೆ ಹರಡಿರುವುದರಿಂದ, ಹೆಣ್ಣು ಹುಲಿಗಳು ಮರಿಗಳನ್ನು ಎರವಲು ಪಡೆದು ಎದೆಗಪ್ಪಿಕೊಂಡು ಲೀಲಾಜಾಲವಾಗಿ ಶಿಕಾರಿ ವೀರರ ನೆರಳನ್ನೇ ತುಳಿದುಕೊಂಡು ಹೋಗುತ್ತವೆ ಎಂದು ಅನೇಕ ಬಾತ್ಮೀದಾರರು ತಿಳಿಸುತ್ತಾರೆ. ಕಾಯಿದೆಗೆ ಕಟ್ಟುಬಿದ್ದು, ಮಹಿಳೆಯರ ವಿಷಯದಲ್ಲಿ ಮಹನೀಯರಿಗಿರಬೇಕಾದ ಮಮತೆ ಗೌರವಗಳನ್ನೇ ಮುಂದಿಟ್ಟು, ಶಿಕಾರಿಗೆ ಅಂತ ಲೈಸೆನ್ಸು ಹಣ ತೆತ್ತವರು ಕೈ ಕೈ ಹಿಸುಕಿಕೊಂಡು ಅಲ್ಲೇ ನಿಂತಿರಬೇಕಾಗುತ್ತದೆ. ಮಕ್ಕಳ ರಕ್ಷಣೆಯಿಲ್ಲದೆ ಮನಸ್ವೀ ತಿರುಗುವ ಮಹಿಳಾ ಹುಲಿಗಳನ್ನು ಕೂಡ ಲೈಸೆನ್ಸುದಾರನು ಕೊಲ್ಲುವಂತಿಲ್ಲ. ಮೂಗಿನ ತುದಿಯಿಂದ ಲಾಂಗೂಲದ ಅಂತ್ಯಸ್ಥಾನದವರೆಗೂ ಅಳತೆ ಮಾಡಿ, ಅಂಗುಲಗಳೆಷ್ಟೆಂದು ಕಂಡು ಹಿಡಿದು, ಬಂದ ಮೊತ್ತವನ್ನು ಹನ್ನೆರಡರಿಂದ ಭಾಗಾಕಾರ ಮಾಡಿದರೆ, ಭಾಗಲಬ್ಧ ಎಂಟಾದರೆ ಮಾತ್ರ ಶಿಕಾರಿ ಶಾಸ್ತ್ರಜ್ಞನು ಹೆಣ್ಣು ಹುಲಿಗಳನ್ನು ಕೊಲ್ಲಬಹುದೇ ಹೊರತು, ಅನ್ಯಥಾ ಅಲ್ಲ! ಗಂಡು ಹುಲಿಯಾದರೆ ಭಾಗ ಲಬ್ಧ ಒಂಬತ್ತಾಗಿರಬೇಕು! ಆದ್ದರಿಂದ ಶಿಕಾರಿಗಾರರೆ

ಲ್ಲರೂ ಟೇಪನ್ನೂ ಸಂಗಡಲೇ ಹಿಡಿದುಕೊಂಡು ಹೋಗಬೇಕಾಗಿದೆ. ಹುಲಿಯನ್ನು ಕಾಣುತ್ತಲೂ, ಅದನ್ನು ಒಂದು ಕಡೆ ನಿಲ್ಲಿಸಿ ಅಳೆದು ಗುಣಾಕರಿಸಿ ಭಾಗಿಸಿ ಅನಂತರ ಮರದ ಮೇಲಿನ ಅಟ್ಟದಲ್ಲಿ ಮಂಡಿಸಿ ಕೆಳಗೆ ಆಡನ್ನೋ ಕೋಣವನ್ನೋ ಕಟ್ಟಿಸಿ, ಹುಲಿಯನ್ನು ಅದರ ಹತ್ತಿರಕ್ಕೆ ತರಿಸಿ ಗುರಿಯಿಟ್ಟು ಗುಂಡು ಹಾರಿಸಬೇಕು.

ಆದರೆ ಈ ಅಳತೆಯ ನೀತಿ ಹುಲಿಗಳಿಗೂ ತಿಳಿದಂತಿದೆ. ತಾವು ಹೆಣ್ಣು ಹುಲಿಗಳು ಎಂದು ಜನರು ಮೋಸ ಹೋಗುವಂತೆ ಹಲವು ಹುಲಿಗಳು ಮೀಸೆಯನ್ನು ಬೋಳಿಸಿಯೇ ತಿರುಗುತ್ತಿರುವುದನ್ನು ಕಾಡು ಕುರುಬರು ಪತ್ತೆ ಹಚ್ಚಿದಾರೆ. ಶಿಕಾರಿಪುರ, ಕುಂಸಿ ಮುಂತಾದ ಕಡೆಗಳಲ್ಲಿ ಹುಲಿಗಳು ಗುಂಡಿನ ಏಟಿಂದ ತಪ್ಪಿಸಿಕೊಳ್ಳಲು ಮುದುರಿಕೊಂಡೇ ನಡೆಯಲು ಅಭ್ಯಾಸ ಮಾಡುತ್ತಿವೆಯಂತೆ. ಉದ್ದವನ್ನು ಸಂಕುಚಿಸಿ ಬಾಲವನ್ನು ಕಾಲ ಸಂದಿಯಲ್ಲಿ ತುರುಕಿಸಿ ಛಂಗನೆ ನೆಗೆಯುವುದನ್ನು ಕಲಿಸುವ ಹುಲಿಶಾಲೆಗಳೂ ಅಲ್ಲಲ್ಲಿ ಆರಂಭವಾಗಿವೆಯಂತೆ. ಹತ್ತಡಿ ಹುಲಿಗಳು ದೂರಕ್ಕೆ ನಾಲ್ಕಡಿಯಷ್ಟು ಕಿರುಮರಿಗಳಾಗಿ ಕಾಣುವಂತೆ ಅಲ್ಲಿ ಕಲಿಸಲಾಗುತ್ತಿದೆಯಂತೆ.

ಅಂತು, ಕಾನೂನುಗಳಲ್ಲಿ ಶಿಕಾರಿಗಳಿಗೆ ನಿರ್ಬಂಧ ಹೆಚ್ಚಿದಷ್ಟೂ, ಹುಲಿಗಳೂ ತಮ್ಮ ಬುದ್ಧಿ ಸಾಮರ್ಥ್ಯಗಳನ್ನುಪಯೋಗಿಸಿ ಸೆಕ್ಷನ್ನುಗಳ ಕಂಡಿಗಳಿಂದ ತೂರಿ ತಪ್ಪಿಸಿಕೊಳ್ಳಲು ಕಲಿಯುತ್ತಿರುವುದು ಸೋಜಿಗದ ಸಂಗತಿ. ನಾ. ಕ




ಡಾಕ್ಟರು–''ಈ ಔಷಧಿ [illegible] ಕೊಳ್ರಿ ಏನೂ ಮಾಡೋದಿಲ್ಲ''
ರೋಗಿ–''ಏನು ಮಾಡದಿದ್ದರೆ ಅದು ಯಾತಕ್ಕೆ''

# ರಾಜೀವಪುರದ ರಾಜಕೀಯ



ನನ್ನ ಜತೆಯಲ್ಲೇ ಲಾ ವ್ಯಾಸಂಗ ಮಾಡುತ್ತಿದ್ದ ಗೋವಿಂದರಾಯನು ಬಲು ವಿಚಿತ್ರ ಪುರುಷ. ಯಾವ ಪರೀಕ್ಷೆಯಲ್ಲೂ ಆತನು ಡುಮ್ಕಿ ಹೊಡೆದಿರಲಿಲ್ಲ. ಯಾವ ವರ್ಷವೂ ಆತನು ಉತ್ತೀರ್ಣನಾಗಲು ಯೋಗ್ಯನಿರಲಿಲ್ಲ ಆದರೂ ಮುಂದೆ ಕುಳಿತು ಉತ್ತರ ಬರೆಯುವವನ ಲೇಖನಿಯ ಓಡುವಿಕೆಯನ್ನು ನೋಡಿಕೊಂಡೇ ತಾನೂ ಉತ್ತರ ಬರೆದು ಉತ್ತೀರ್ಣನಾಗುತ್ತಿದ್ದ. ಇದು ಹೇಗೆ ಸಾಧ್ಯ ಎಂದು ನಿಮಗೂ ನ್ಯಾಯವಾಗಿಯೇ ಅನುಮಾನ ಬರಬಹುದು. ಆದರೆ ಕಿವಿ ಕೇಳಿಸದೆ ಇರುವ ಕೆಪ್ಪರು ಕೆಲವರು ಮಾತನಾಡುವವರ ತುಟಿಗಳಿಂದಲೇ ಅವರಾಡುವ ಮಾತನ್ನು ಅರ್ಥಮಾಡಿಕೊಳ್ಳುವಿದಿಲ್ಲವೇ? ಇದಕ್ಕೆ ತುಟಿಯೋದುವಿಕೆ ಎಂದು ವೈದ್ಯರು ನಾಮಕರಣ ಮಾಡಿಲ್ಲವೇ? ತುಟಿಯನ್ನೋದುವಿಕೆಯನ್ನು ಹೇಳಿಕೊಡಲೋಸುಗವೇ ಶಾಲೆಗಳಿಲ್ಲವೆ? ಇದೆಲ್ಲವನ್ನು ತಿಳಿದ ಮೇಲೆ ಬರೆದವನ ಲೇಖನಿ ನೋಡಿ ಕಾಪಿ ಮಾಡಲಾಗದೇ? ಆಗದೇ ಇರಲಿ ಹೋಗಲಿ ಗೋವಿಂದನು ಇದನ್ನು ಸಾಕ್ಷಾತ್ತಾಗಿ ನನಗೆ ತಿಳಿದಂತೆ ಸಾಧಿಸಿದ್ದ. ಲಾ ಕಾಲೇಜಿನಲ್ಲಿಯೂ ಈ ಒಂದು ಉಪಾಯದಿಂದ ಪಾಸು ಮಾಡಿದ್ದ.

ಪಾಸಾದ ಮಾತ್ರಕ್ಕೇ ವಾದಿಸಲ್ಕು ಬರುವುದೇ? ಕೋರ್ಟಿನಲ್ಲಿ ಅಡ್ವೊಕೇಟಾಗಿ ದಾಖಲಾದವನು ಮೊದಲ ಮೂರು ವರುಷ ಒಂದು ಕೇಸನ್ನಾದರೂ ಗೆಲ್ಲಲಿಲ್ಲ. ಅದಕ್ಕೊಂದೇ ಕಾರಣ. ಒಂದು ಕೇಸೂ ಸಿಗಲಿಲ್ಲ. ಹೀಗಾಗಿ ಕಡೆ ಕಡೆಗೆ ನಾನು ಇಲ್ಲಿನ ತನಕ ಒಂದು ಕೇಸನ್ನೂ ಸೋತಿಲ್ಲ ಎಂದು ಬಹಿರಂಗವಾಗಿ ಜಾಹೀರಾತು ಮಾಡಲಾರಂಭಿಸಿದ್ದ. ಏನೇನು ಮಾಡಿದರೂ ಅದೃಷ್ಟವಿಲ್ಲದಿದ್ದರೆ ಏನು ಸಾರ್ಥಕ? ಕಟ್ಟಕಡೆಗೆ ಕಾದು ಕಾದು ಸೋತು ಬೇಜಾರಾಗಿ ಎಲ್ಲರಂತೆ ಆತನೂ ರಾಜೀವಪುರದಲ್ಲಿ ವಕೀಲಿತನ ಮಾಡುವುದೇ ಒಳ್ಳೆಯದೆಂದೂ, ಷಹರಿಗಿಂತ ರಾಜೀವಪುರದ ಜೀವನವು ಸುಲಭವೆಂದೂ ತೀರ್ಮಾನಿಸಿದನು. ಹಾಗೆಯೇ ರಾಜೀವಪುರಕ್ಕೆ ಹೋಗಿ ವಕೀಲಿ ಬೋರ್ಡೊಂದನ್ನು ಮನೆಯ 'ಬಾಡಿಗೆಗೆ ದೊರೆಯುತ್ತೆ' ಬೋರ್ಡಿನ ಹಿಂದೆ ಬರೆಸಿದವನು ಅಲ್ಲೇ ಬೆಳಗಿನಿಂದ ಸಂಧ್ಯಾಕಾಲದವರೆಗೂ ಕೇಸುಗಳಿಗಾಗಿ ಕಾಯಲಾರಂಭಿಸಿದನು. ದೈವ ಸಹಾಯವಿಲ್ಲದಿದ್ದರೆ ಷಹರೇನು ರಾಜೀವಪುರವೇನು? ಅಲ್ಲೂ ಮೂರು ತಿಂಗಳು ವಿಶ್ರಾಂತಿಯೇ! ಆದರೆ ಆ ವೇಳೆಗೆ ಇವನಿಗೆ ಹಲವಾರು ಪುರ ಪ್ರಮುಖರ ಸ್ನೇಹ ದೊರೆ

ತಿತ್ತು. ಅವರೆಲ್ಲರೂ ಷಹರಿನ ಗೋವಿಂದರಾಯನನ್ನು ಮುಂದುಮಾಡಿಕೊಂಡ್ರು ತಮ್ಮ ಚಳುವಳಿಯನ್ನು ಹೂಡಿ ತಮ್ಮ ತಮ್ಮ ವರಮಾನದ ತೆರಿಗೆಯನ್ನಾದರೂ ಕಡಿಮೆ ಮಾಡಿಕೊಳ್ಳೋಣವೆಂದು ಅಂದಾಜು ಹಾಕಿ, ಪ್ರಗತಿ ಪಕ್ಷ ಎಂಬ ಒಂದು ರಾಜಕೀಯ ಪಕ್ಷವನ್ನು ಸ್ಥಾಪಿಸಿದರು. ಗೋವಿಂದರಾಯನೇ ಅಧ್ಯಕ್ಷ. ಮಿಕ್ಕವರ ಹೆಸರಾವುದೂ ಮುಂದಕ್ಕೆ ಬರಲಿಲ್ಲ. ಅಂತೂ ಇಂತೂ ಪ್ರಗತಿ ಪಕ್ಷ ಎಂದರೆ ಗೋವಿಂದರಾಯ ಎನ್ನುವಂತಾಯಿತು.

ಚಳುವಳಿಗೆ ಆರಂಭವಾಯಿತು. ಒಂದು ದಿನ ಶಾಲೆಯ ಗೋಡೆಗಳ ಮೇಲೆಲ್ಲಾ "ಪರದೇಶೀಯರೇ ಪರಾರಿಯಾಗಿರಿ" ಎಂದು ಹೆತ್ತಕ್ಷರದ ಅಪ್ಪಣೆ. ಮರುದಿನ ಹಾದಿಯ ಮೇಲೆಲ್ಲಾ "ನೌಕರರೇ ರಾಜೀನಾಮೆ ಕೊಡಿರಿ" ಎಂಬ ಕಟ್ಟಾಜ್ಞೆ. ಈ ರೀತಿ ಚಳುವಳಿಗೆ ಆರಂಭವಾಯಿತು. ಅಧಿಕಾರಿಗಳಿಗೂ ಇದನ್ನು ಕಂಡು ಬೇಸರವಾಯಿತೇ ವಿನಹಾ ಇದರಿಂದ ಇನ್ನೇನೂ ಆದಂತೆ ಕಾಣಲಿಲ್ಲ.

ಆಗ ನೋಡಿ ಪ್ರಗತಿ ಪಕ್ಷದ ಮರೆಯಲ್ಲಿ ಕೆಲಸ ಮಾಡುವ ಅನಾಮಾಂಕಿತರಿಬ್ಬರು ಗೋವಿಂದರಾಯರನ್ನು ಭೇಟಿ ಮಾಡಿದರು. ರಾಯರಿಗೆ ಹೇಳಿದರು. "ಸ್ವಾಮಿ. ನಮ್ಮ ಚಳುವಳಿಯಿಂದ ಯಾರಿಗೂ ಪ್ರಯೋಜನವಾಗುವಂತಿಲ್ಲ. ಸರ್ಕಾರದವರು ನಿಮಗೂ ಹೇಳಿ ಕಳುಹಿಸಿಲ್ಲ. ನಮಗೂ ಹೇಳಿಕಳಿಸಿಲ್ಲ. ನಮ್ಮಲ್ಲಾರಾದರೂ ಹೋಗಿ ಯಥಾಶಕ್ತಿ ಪ್ರಯೋಜನ ಹೊಂದೋಣವೆಂದರೆ ಸಾಧ್ಯವಿಲ್ಲ. ಅದಕ್ಕಾಗಿ ನಮ್ಮ ಚಳುವಳಿಯನ್ನು ಇನ್ನೂ ಕಠಿಣವಾಗಿ ನಡೆಸಬೇಕು. ತಾನುಮುಂದಾಳಾಗಿದ್ದುಕೊಂಡುಇದನ್ನು ನಡೆಸಲೇಬೇಕು. ಕೆಲಸವನ್ನೇನೂ ಮಾಡಬೇಕಾಗಿಲ್ಲ. ಆದರೆ ಇಂತಹಾ ಸರ್ಕಾರೀ ಕಟ್ಟಡವನ್ನು ಇಂತಹ ದಿನ ಸುಡುತ್ತೇವೆ. ಇಂತಹ ರೈಲನ್ನು ಉರುಳಿಸುತ್ತೇವೆ ಎಂದು ಸುಮ್ಮ ಸುಮ್ಮನೆ ಪ್ರಚಾರ ಮಾಡಿಸಿದರೆ ಸಾಕು. ಸರ್ಕಾರದವರು ನಿಮ್ಮನ್ನು ಕರೆಕಳುಹಿಸಿ ಹೀಗೆ ಮಾಡುವುದೇ ಎನ್ನುತ್ತಾರೆ ಆವಾಗ 'ಸಿಕ್ಕಿದವರಿಗೆ ಸೀರುಂಡೆ.'

ಗೋವಿಂದರಾಯನಿಗೆ ಇದೇನೊ ಸುಲಭವಾಗಿ ಕಂಡಿತು. ಹಾಗೆಯೇ ಆಗಲಿ ಎಂದು ಕಷ್ಟಪಟ್ಟು ಇಪ್ಪತ್ತು ಮೂವತ್ತು ಕಾಗದಗಳನ್ನು ಹೆಂಗಸಿನ ಅಕ್ಷರದಲ್ಲಿ ಬರೆದು, ಪ್ರತಿಯೊಂದನ್ನೂ ಸರ್ಕಾರಿ ಅಧಿಕಾರಿಗಳಿಗೂ ದೈನಂದಿನ ಪತ್ರಿಕೆಗಳಿಗೂ ಕಳುಹಿಸಿದನು.

ಆದರೆ ಆತನಿಗೆ ತಿಳಿಯದೆ ಇದ್ದುದು ಒಂದೇ ಸಂಗತಿ. ಇವನಿಗೆ ಸಲಹೆ ಕೊಟ್ಟವರು ಆ ಮೊದಲೇ ಸರ್ಕಾರದ ಅಧಿಕಾರಗಳಲ್ಲಿಗೆ ಹೋಗಿ 'ಸ್ವಾಮಿ. ಶ್ರೀ ಗೋವಿಂದರಾಯರು ಇಂತಿಂತಹ ಅಘೋರ ಕೃತ್ಯಗಳನ್ನು ಮಾಡಬೇಕೆಂದಿದ್ದಾರೆ. ನಮ್ಮನ್ನು ನೆರವಾಗಬೇಕೆಂದು ಕೇಳಿದರು. ಅವರೆದುರಿಗೆ ಆಗಲಿ ಎಂದೊಪ್ಪಿ ನಿಮ್ಮಲ್ಲಿಗೆ ರಕ್ಷಣೆಗಾಗಿ ಬಂದಿದ್ದೇವೆ. ಇದು ಜನಸಾಮಾನ್ಯಕ್ಕೆ ತಿಳಿದರೆ ನಮ್ಮ ವ್ಯಾಪಾರವು ಹಾಳಾಗುತ್ತದೆ ಎಂದು ಹೇಳಿ

ದರು. ಹಾಗೆಯೇ ತಮ್ಮ ಹಿಂದಿನ ವರ್ಷದ ವರಮಾನದ ತೆರಿಗೆಯು ಬಹಳ ಹೆಚ್ಚಾಗಿ ಹಾಕಲ್ಪಟ್ಟಿತೆಂದೂ ಅದನ್ನು ಸರಿ ಮಾಡಬೇಕೆಂದೂ ಪ್ರಾರ್ಥಿಸಿದರು. ಅಧಿಕಾರಿಗಳಿಗೆ ಬಲು ಸಂತೋಷ. "ಹಾಗೆಯೇ ಆಗಲಿ, ನೀವೊಂದು ಅರ್ಜಿ ಹಾಕಿಕೊಳ್ಳಿರಿ" ಎಂದು ಹೇಳಿ ಧನ್ಯವಾದಗಳೊಡನೆ ಅವರನ್ನು ಬೀಳ್ಕೊಟ್ಟರು.

ಮರುದಿನ ಗೋವಿಂದರಾಯರ ಕಾಗದಗಳೂ ಅಧಿಕಾರಿಗಳಿಗೆ ತಲುಪಿತು. ಅಧಿಕಾರಿಗಳಿಗೆ ಸ್ವಲ್ಪ ಅನುಮಾನ ಬಂತು. ಆರರೆ? ಇಷ್ಟು ಬೇಗ ಈತನು ಈ ಕಾರ್ಯಕ್ರಮವನ್ನೆಲ್ಲಾ ಸಿದ್ಧಪಡಿಸಿ ಹತ್ತಾರು ಪ್ರತಿಗಳನ್ನು ತಯಾರಿಸಿ ನಮಗೆಲ್ಲಾ ಕಳುಹಿಸಿದ್ದಾನೆ. ಇಂತಹವನನ್ನು ನಮ್ಮ ಕಡೆಗೇ ಎಳೆದುಕೊಂಡರೆ ಈ ಚಳುವಳಿಯನ್ನು ಆತನೇ ಕೊನೆಗಾಣಿಸಲು ಬಲು ಸುಲಭ'' ಎಂದು ತಮ್ಮಲ್ಲಿ ತಾವೇ ಒಪ್ಪಿಗೆಗೆ ಬಂದು ಗೋವಿಂದರಾಯನಿಗೆ ಹೇಳಿ ಕಳುಹಿಸಿದರು.

ಅಧಿಕಾರಿಗಳಿಗೂ ಗೋವಿಂದರಾಯನಿಗೂ ಮರುದಿನ ಮಿಲಾಖತ್ತು. ಅಧಿಕಾರಿಗಳಂದರು "ರಾಯರೇ ನಿಮ್ಮ ಚಳುವಳಿಯ ಸಹಾಯಕರಿಬ್ಬರೂ ನಮಗೆ ಗೊತ್ತು" ಎಂದು. ಗೋವಿಂದರಾಯರು "ಸಸಹಸ್ರ ಜನ ಸಹಾಯಕರಿರುವಲ್ಲಿ ಇಬ್ಬರಿಂದೇನು ನಷ್ಟ" ಎಂದು ಪಲುಕಿದರು.

ಅಧಿಕಾರಿಗಳಿಗೆ ಆಗಲೇ ಗಾಭರಿ. ಇರಬಹುದೇನೋ ಸಹಸ್ರ ಜನರು ಎಂದು. ಕೂಡಲೇ ರಾಯರನ್ನು ಕೇಳಿದರು.

'ನೋಡಿ ರಾಯರೇ, ನಾವೂ ನಿಮ್ಮವರೇ! ನಾವು ನಾವು ಯಾಕೆ ಗಲಾಟೆ ಮಾಡಿಕೊಳ್ಳಬೇಕು. ಪರರಾಜ್ಯವಲ್ಲವಲ್ಲ ಇದು. ನೀವು ಪ್ರಗತಿಗಾಮಿಗಳು ಬುದ್ಧಿವಂತರು ಅಲ್ಲದೇ ವಿದ್ಯಾವಂತರು. ಸ್ವಾತಂತ್ರಪ್ರಿಯರು. ನಿಮ್ಮಂತಹವರೇ ಅಧಿಕಾರಿ ವರ್ಗದಲ್ಲಿದ್ದರೆ, ಸಂಸ್ಥಾನಕ್ಕೆ ಕ್ಷೇಮ. ಅಲ್ಲದೆ ನಿಮಗೂ ಕ್ಷೇಮ. ಈ ಊರ ಮ್ಯಾಜಿಸ್ಟ್ರೇಟರ ಕೆಲಸ ಖಾಲಿ ಇದೆ. ನಮ್ಮ ಮಂತ್ರಿಮಂಡಲದವರಿಗೆ ನಿಮ್ಮನ್ನು ಚುನಾಯಿಸಬೇಕೆಂದು ಆಶೆ ಇದೆ. ನೀವು ಸಹಾಯಕ ಹಸ್ತವನ್ನಿತ್ತು ಒಪ್ಪುವಿರಾ' ಎಂದರು.

ಗೋವಿಂದರಾಯರಿಗೆ ಲೋಕವೇ ತಲೆಕೆಳಕಾದಂತಾಯಿತು. ಹೊಟ್ಟೆಗಿಲ್ಲದ ಲಾಯರ ಕೆಲಸ ಹೋಗಿ, ಮ್ಯಾಜಿಸ್ಟ್ರೇಟರ ಕೆಲಸ ದೊರಕಿ, ಚಳುವಳಿಯ ಗೋಳು ತಪ್ಪಿ, ಸಹಾಯಕರ ದ್ರೋಹವೂ ತಪ್ಪಿ-ಅಲ್ಲಾ ದೇವರು ಇನ್ನೇನು ತಾನೇ ಮಾಡಬಲ್ಲ ತನಗೆ ಬಹಳ ಬೇಕಾದ ಭಕ್ತನಿಗೆ? ಸರಿ. ಆಗಲಿ ಎಂದು ಒಪ್ಪಿದನು. ಮರುದಿನವೇ ಸರ್ಕಾರಿ ಪ್ರಕಟಣೆಯೊಂದು ಹೊರಟಿತು. ಶ್ರೀ ಗೋವಿಂದರಾಯನು ಊರ ಮ್ಯಾಜಿಸ್ಟ್ರೇಟು.

ರಾಜೀವಪುರದ ಅಧಿಕಾರಿ ಚುನಾವಣೆಯೆಲ್ಲಾ ಇದೇ ರೀತಿಯದು ಎಂದು ಹೇಳಲಾಗುವುದಿಲ್ಲ ಆದರೂ ಬಹುವಾಗಿ ಇದೇ ರೀತಿ.

ಶ್ರೀ ಗೋವಿಂದರಾಯನು ಮೊದಲು ಏನು ಮಾಡಿದನು ಗೊತ್ತೆ. ವರಮಾನ ತೆರಿಗೆಯ ಅರ್ಜಿಯು ತನ್ನ ಪೂರ್ವ ಸಹಾಯಕರಿಂದ ಬಂದ ಕೂಡಲೇ ಅದನ್ನು ದೀರ್ಘವಾಗಿ ಪರಿಶೀಲಿಸಿ, ಅವರಿಬ್ಬರಿಗೂ ಸರ್ಕಾರಕ್ಕೆ ದ್ರೋಹ ಮಾಡಿದ ಆಪಾದನೆಯ ಮೇಲೆ ಎರಡೆರಡು ವರ್ಷ ಕಠಿಣ ಸಜಾ ವಿಧಿಸಿದನು.

ಹೀಗೆಯೇ ರಾಜೀವಪುರದಲ್ಲಿ ಯಾವು ಯಾವುದೋ ಕಾರಣದಿಂದಲಾದರೂ ಸತ್ಯಕ್ಕೆ ಒಮ್ಮೆಯಾದರೂ ಜಯವುಂಟು. ತಪ್ಪಿತಸ್ಥರಿಗೆ ಶಿಕ್ಷೆಯೂ ಉಂಟು.

---

# 'ಮೈಸೂರು ಇನ್‌ಷೂರೆನ್ಸ್ ಕಂಪನಿ, ಮತ್ತು 'ಮೈಸೂರು ಪ್ರಾವಿಡೆಂಟ್ ಇನ್‌ಷೂರೆನ್ಸ್ ಕಂಪನಿ'

## ಪ್ರಧಾನ ಕಛೇರಿ—ಬೆಂಗಳೂರು ನಗರ



— ಹೊಸದಾಗಿ ತೆರೆದಿರುವ ಕಛೇರಿಗಳು —

ಒಂದು ಆರ್ಗನೈಜೇಷನ್ ಕಛೇರಿ—

**ವಿಲ್ಸನ್ ರಸ್ತೆ, ಲಕ್ಷ್ಮೀಪುರಂ, ಕೊಲ್ಹಾಪುರ.**

ಒಂದು ಉಪ ಕಛೇರಿ—

**ನಂ. ೧೪, ಮೈಕೇಲ್ ಎಂಪೋರಿಯಂ, ಬಿಗ್ ಬಜಾರ್, ಕೊಯಮುತ್ತೂರು**

● ಸಾಂಗ್ಲಿ ಮತ್ತು ಕೊಲ್ಹಾಪುರ ಸಂಸ್ಥಾನಗಳ ಸುಪ್ರಸಿದ್ಧ ನ್ಯಾಯವಾದಿಗಳು ಮತ್ತು ಉದ್ಯಮ ಸಾಧಕರಿಂದೊಡಗೂಡಿದ ಸಮರ್ಥವೂ ಪ್ರಭಾವಯುತವೂ ಆದ ಆಡಳಿತ ಸಭೆಯ ಮೇಲ್ವಿಚಾರಣೆಯನ್ನು ಆರ್ಗನೈಜೇಷನ್ ಕಛೇರಿಯೊಂದನ್ನು ಮೇಲೆ ಕಂಡಂತೆ ಕೊಲ್ಹಾಪುರದಲ್ಲಿಯೂ, ಮತ್ತು ಉಪ ಕಛೇರಿಯೊಂದನ್ನು ಕೊಯಮುತ್ತೂರಿ (ಮದ್ರಾಸ್ ಪ್ರೆಸಿಡೆನ್ಸಿ)ನಲ್ಲಿಯೂ, ಸಹ ಪ್ರಾರಂಭಿಸಲಾಗಿದೆಯೆಂಬ ಸಂತೋಷದ ಸುದ್ದಿಯನ್ನು ಪ್ರಕಟಿಸಲು ನಾವು ಸಂತೋಷಭರಿತರಾಗಿದ್ದೇವೆ.

● ವಿಮೆಯೇ ವಿಮಾನಧಾಳಿಯ ಸಂದರ್ಭದಲ್ಲಿ ಅಭೇದ್ಯವಾದ ರಕ್ಷಣಾ ಸ್ಥಾನವಾಗಿದೆ. ಆದ್ದರಿಂದ ಇಂದೇ "ಮೈಸೂರು ವಿಮಾ ಸಂಸ್ಥೆ" ಗಳಲ್ಲಿ ವಿಮೆ ಮಾಡುವುದರ ಮೂಲಕ ನಿಮ್ಮ ಜನಗಳನ್ನೂ ಧನವನ್ನೂ ಸುರಕ್ಷಿತವಾಗಿ ಕಾಪಾಡಿರಿ.

**ಹೆಚ್ಚಿನ** ವಿವರಗಳ ಬಗ್ಗೆ ಕೆಳಗಿನ ವಿಳಾಸಗಳಿಗೆ ಈ ದಿನವೇ ಬರೆಯಿರಿ—

## ಮೈಸೂರು ಇನ್‌ಷೂರೆನ್ಸ್ ಕಂಪನಿ ಮತ್ತು ಮೈಸೂರು ಪ್ರಾವಿಡೆಂಟ್ ಇನ್‌ಷೂರೆನ್ಸ್ ಕಂಪನಿ

**"ಲಕ್ಷ್ಮೀಸ್ಥಾನಂ", ಲಾಲ್‌ಬಾಗ್ ಕೋಟೆ ರಸ್ತೆ, ಬೆಂಗಳೂರು ನಗರ.**

ಅಥವಾ

ಬ್ರಿಟಿಷ್ ಭಾರತದ ಮುಖ್ಯ ಕಛೇರಿ—

**ಕೆರವೀರ ಶೆಟ್ಟಿ ಬಿಲ್ಡಿಂಗ್, : : ಜನಳಿ ಚೌಕ ಹುಬ್ಬಳ್ಳಿ**

Printed at Prajamata Power Press, by K. Jeevanna Rao Bangalore City and Published by C. ALAVANDAR, B.A., Editor: Dr. R. SHIVARAM.